KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜನವರಿ ೨೬, ೨೦೦೬ (ಮಾಘ ೬, ಶಕ ವರ್ಷ ೧೯೨೭) | ಸಂಚಿಕೆ ೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾರ್ಮಿಕ ಸಚಿವಾಲಯ

**ವಿಷಯ:** ಕಾಣೆಯಾಗಿರುವ ಶ್ರೀ ಎ. ಚಿಕ್ಕರಸಪ್ಪ, ಇವರ ಪತ್ನಿ ಶ್ರೀಮತಿ ಗಂಗಮ್ಮ ಇವರಿಗೆ ಕುಟುಂಬ ಪಿಂಚಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರ ದಿನಾಂಕ: 9.1.2004ರ ಪತ್ರ ಸಂಖ್ಯೆ: ಉತಇ/ತರಬೇತಿ/ಆಡಳಿತ-5/ವಿವ-104/2003-04 ಮತ್ತು ಮುಂದುವರಿದ ಪತ್ರಗಳು.

2) ಸರ್ಕಾರದ ದಿನಾಂಕ: 21.3.1988ರ ಅಧಿಕೃತ ಜ್ಞಾಪನ ಸಂಖ್ಯೆ (ವಿಶೇಷ) 11 ಕುವಿವೇ 87.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 9.1.2004ರ ಪತ್ರದಲ್ಲಿ ನಿರ್ದೇಶಕರು ಶ್ರೀ ಎ. ಚಿಕ್ಕರಸಪ್ಪ, ಇವರು ಬೆಂಗಳೂರಿನ ಕೈಗಾರಿಕಾ ತರಬೇತಿ ಸಂಸ್ಥೆ (ವಿವೇಕನಗರ), ಬೆಂಗಳೂರು-27 ಇಲ್ಲಿ 'ಡಿ' ಪಂಗಡದ ನೌಕರರಾಗಿ ಕಾರ್ಯ ನಿರ್ವಹಿಸುತ್ತಿದ್ದು ದಿನಾಂಕ: 24.5.1994 ರಿಂದ ಕಾಣೆಯಾಗಿರುತ್ತಾರೆಂದು ತಿಳಿಸಿ, ಈ ಸಂಬಂಧದಲ್ಲಿ ಸದರಿ ನೌಕರರ ಪತ್ನಿ ಶ್ರೀಮತಿ ಗಂಗಮ್ಮನವರಿಗೆ ಕುಟುಂಬ ಪಿಂಚಣಿಯನ್ನು ಮಂಜೂರು ಮಾಡಲು ಪ್ರಸ್ತಾಪಿಸಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಗಿನ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಕಾಇ 23 ಇಟಿಐ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2005**

ಕಾಣೆಯಾಗಿರುವ ಶ್ರೀ ಎ. ಚಿಕ್ಕರಸಪ್ಪ, ಇವರ ಪತ್ನಿ ಶ್ರೀಮತಿ ಗಂಗಮ್ಮ ಇವರಿಗೆ ದಿನಾಂಕ: 21.3.1988ರ ಅಧಿಕೃತ ಜ್ಞಾಪನ ಸಂಖ್ಯೆ ಆರ್ಥಿಕ (ವಿಶೇಷ) 11 ಕುವಿವೇ 87 ಕಂಡಿಕೆ 5(3)ರ ಪ್ರಕಾರ ವಚನ ಪ್ರಮಾಣ ಪತ್ರವನ್ನು ನಾಮನಿರ್ದೇಶಕರಿಂದ ಪಡೆಯುವ ಷರತ್ತಿಗೊಳಪಟ್ಟು ಕುಟುಂಬ ವಿಶ್ರಾಂತಿ ವೇತನವನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ವಿಶೇಷಾಧಿಕಾರಿ (ಪ್ರಭಾರ) ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ (ವಿ) 2770/05(ಎ) ದಿನಾಂಕ: 25.11.2005ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 03 ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

### ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಕೃತೋಇ 53 ಕೃಪಇ 2005, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

ದಿನಾಂಕ: 31.12.2004 ರಂದು ಹೊರಡಿಸಲಾದ ಅಧಿಸೂಚನೆ ಸಂಖ್ಯೆ: ಕೃತೋಇ 60 ಕೃಪಇ 2004 ರಲ್ಲಿ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಲು ಅನುಮತಿ ನೀಡಲಾದ ಪುಟ-4ರ ಕ್ರಮ ಸಂಖ್ಯೆ 37 ರಲ್ಲಿ ಶ್ರೀ ಕೆ.ಎ. ಶ್ರೀನಿವಾಸಯ್ಯ, ಸಹಾಯಕ ಕೃಷಿ ನಿರ್ದೇಶಕರನ್ನು

ಹಾಗೂ ಪುಟ-7ರ ಕ್ರಮ ಸಂಖ್ಯೆ 33 ರಲ್ಲಿ ಶ್ರೀ ಜಿ. ವೆಂಕಟೇಶ್, ಕೃಷಿ ಅಧಿಕಾರಿ ಇವರನ್ನು ದಿನಾಂಕ: 31.12.2005 ರಂದು ವಯೋನಿವೃತ್ತಿ ಹೊಂದಲು ಸೇರ್ಪಡೆ ಮಾಡಿ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 05 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ವರ್ಗಗಳ ನಿರುದ್ಯೋಗಿ ಅಭ್ಯರ್ಥಿಗಳಿಗೆ ಪೈಲೆಟ್ ತರಬೇತಿ ಕಾರ್ಯಕ್ರಮದ ಅನುಮೋದನೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005, ದಿನಾಂಕ: 28.05.2005.
2) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಪವಕನಿ: ಗಿಉಯೋ: ಸಿಆರ್.82: 2004-05, ದಿನಾಂಕ: 25.10.2005.
3) ದಿನಾಂಕ: 02.12.2005ರ ಅಧಿಕಾರಯುಕ್ತ ಸಮಿತಿಯ ನಡವಳಿಗಳು.

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸರ್ಕಾರವು ಈ ಕೆಳಕಂಡಂತೆ ಘೋಷಿಸಿದೆ.

"ಬೆಂಗಳೂರಿನಲ್ಲಿರುವ ಸರ್ಕಾರಿ ವಿಮಾನ ಹಾರಾಟ ತರಬೇತಿ ಶಾಲೆಯು ಸಮಾಜ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ಪರಿಶಿಷ್ಟಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ವಿಮಾನ ಹಾರಾಟ ತರಬೇತಿಯನ್ನು ನೀಡುವ ವಿನೂತನ ಯೋಜನೆಯನ್ನು ಪ್ರಾರಂಭಿಸಿದೆ. ಆರಂಭದಲ್ಲಿ ಹತ್ತು ಮಂದಿ ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುವುದು. ಮುಂದಿನ ವರ್ಷಗಳಲ್ಲಿ ಹೆಚ್ಚು ಮಂದಿಗೆ ತರಬೇತಿ ನೀಡಲಾಗುವುದು."

ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ತಮ್ಮ ಏಕ ಕಡತದಲ್ಲಿ 2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದ ಪ್ರಕಾರ 10 ನಿರುದ್ಯೋಗಿ ಪರಿಶಿಷ್ಟ ವರ್ಗಗಳ ಯುವಕರಿಗೆ ಏರ್‌ಕ್ರ್ಯಾಪ್ಟ್ ಪೈಲೆಟ್ ತರಬೇತಿ ಕಾರ್ಯಕ್ರಮಕ್ಕಾಗಿ upfront pooled funds ರೂ.130.00 ಲಕ್ಷಗಳನ್ನು ಒದಗಿಸಲು ಕೋರಲಾಗಿತ್ತು. ಆದರೆ ಸರ್ಕಾರದ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005 ದಿನಾಂಕ: 28.05.2005 ರಲ್ಲಿ ಕಾರ್ಯಕ್ರಮಕ್ಕೆ ಹಣ ಒದಗಿಸಿಲ್ಲವೆಂದು ತಿಳಿಸಿದ್ದಾರೆ. ಪ್ರಸ್ತುತ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿ ನಿಲಯಗಳಿಗೆ ಆಹಾರ ವೆಚ್ಚಕ್ಕಾಗಿ ರೂ.70.00 ಲಕ್ಷಗಳನ್ನು ಒದಗಿಸಲಾಗಿದೆಯೆಂದು, ಇದರಲ್ಲಿ ಸುಮಾರು ರೂ.40.00 ಲಕ್ಷಗಳ ಹಣ ಉಳಿತಾಯವಾಗುತ್ತದೆಂದು ತಿಳಿಸಿ, ಈ ಉಳಿತಾಯದ ಹಣದಲ್ಲಿ ಮೂರು ಪರಿಶಿಷ್ಟ ವರ್ಗದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಏರ್‌ಕ್ರ್ಯಾಪ್ಟ್ ಪೈಲೆಟ್ ತರಬೇತಿಯನ್ನು ನೀಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ. ಈ ತರಬೇತಿ ಕಾರ್ಯಕ್ರಮವು 18 ತಿಂಗಳಿದ್ದು, ಒಬ್ಬ ಅಭ್ಯರ್ಥಿಗೆ ಒಟ್ಟು ವೆಚ್ಚ ರೂ.13.00 ಲಕ್ಷಗಳಾಗುತ್ತದೆಂದು ತಿಳಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 411 ಪವಯೋ 2005, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2005**

ಸರ್ಕಾರವು ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಗಣಿಸಿ, 2005-06ನೇ ಸಾಲಿನಲ್ಲಿ ಪರಿಶಿಷ್ಟ ವರ್ಗಗಳ ನಿರುದ್ಯೋಗಿ ಮೂರು ಯುವಕರಿಗೆ ಏರ್‌ಕ್ರ್ಯಾಪ್ಟ್ ಪೈಲೆಟ್ ತರಬೇತಿಯನ್ನು ನೀಡಲು ಸರ್ಕಾರವು ತನ್ನ ಅನುಮೋದನೆಯನ್ನು ನೀಡಿದೆ. ಇದಕ್ಕೆ ತಗಲುವ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005, ದಿನಾಂಕ: 28.05.2005 ರಲ್ಲಿ ಪರಿಶಿಷ್ಟ ವರ್ಗದ ನಿಲಯದ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚದ ಪರಿಷ್ಕರಣೆ ವೆಚ್ಚಕ್ಕಾಗಿ ಓದಲಾಗಿರುವ ರೂ.70.00 ಲಕ್ಷಗಳಲ್ಲಿ ಉಂಟಾಗುವ ಉಳಿತಾಯದಲ್ಲಿ ಭರಿಸುವುದು. ಈ ಕಾರ್ಯಕ್ರಮವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ನಿಯಮಗಳ ಅನುಸಾರ ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ: 02.12.2005 ರಂದು ಅಧಿಕಾರಯುಕ್ತ ಸಮಿತಿಯು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 18 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Release of funds towards New Cost Sharing Railway Projects.

**Read:**
1. G.O. No. IDD NSW 2002 dt. 22.11.2002.
2. G.O. No. IDD NSW 2002 dt. 22.03.2002.
3. G.O. No. IDD 1 NSW 2002 dt. 19.02.2003.
4. G.O. No. IDD 47 NSW 2003 dt. 12.09.2003.
5. G.O. No. IDD 4 NSW 2003 dt. 22.1.2004.
6. G.O. No. IDD 47 NSW 2003 (P) dt. 26.03.2004.
7. G.O. No. IDD 51 NSW 2004 dt. 19.07.2004.
8. G.O. No. IDD 63 IDM 2005 dt. 25.05.2005.
9. D.O letter No. SPLA/DO/2388/05 dt. 07.06.2005 from Hon'ble Speaker, Karnataka Legislative Assembly addressed to the then Hon'ble Dy. CM.
10. Note No.IDD 63 IDM 05, dated 27.08.2005 from PRS, IDD to the Hon'ble Miniter for Industries & Infrastructure
11. G.O. No. FD 357 BRS 2005 dt. 14.11.2005.

**PREAMBLE:**

Government of Karnataka has so far released Rs. 13.00 crores towards its share of the Investment on Cost Sharing Projects, through various Government Orders read at Sl. Nos. 1 to 8 above.

2. Hon'ble Speaker, Karnataka Legislative Assembly in his DO letter addressed to the then Hon'ble Dy.Chief Minister read at Sl. No. 9 above, has requested for release of Rs. 7.00 crores to Bangalore-Kengeri-Kengeri-Ramanagaram Doubling of Railway line project and to expedite the project in public interest. Since sufficient funds were not available in the head of account "5465-01-190-05-211- Cost Sharing for New Project Investments (Plan)", a decision was taken in the meeting held on 25.08.2005 under the Chairmanship of Principal Secretary to Government, Infrastructure Development Department for release of a total sum of Rs.2.50 crores (Rupees Two Crores and Fifty lakhs) only for the above purpose as follow:

1) By way of releasing Rs.1.00 crore (Rupees One Crore) only available out of Head of Account 5465-01-190-3-05-211 – "Cost Sharing for New Project – Investment (Plan)"

and

2) By way of re-appropriation of a sum of Rs.1.50 crores (Rupees One Crore and Fifty lakhs) only from the Head of Account 5465-01-190-3-05 (Plan) from the savings under the Head of Account 5465-01-190-3-07 - 211 (Plan).

Accordingly a note was moved to Finance Department vide note as read at Sl.10 above.

3. The Finance Department in their order read at Sl. No.11 above, accorded sanction for the re-appropriation of a sum of Rs.150.00 lakhs under the major head of account " 5465- Capital outlay on General Financial and Trading Institutions during 2005-06 and Finance Department vide their U.O. Note No. FD 1623 Exp-I/05 dated 14.11.2005 have concurred for release of a sum of Rs.1.00 crore (Rupees One Crore) only under the Head of Account 5465-01-190-3-05 (Plan) 211 towards "Cost Sharing Railway Projects" for Bangalore – Kengeri –Kengeri - Ramanagaram Double Line Railway System.

4. Hence this order.

**GOVERNMENT ORDER NO.IDD 66 NSW 05, BANGALORE, DATED: 16th December 2005**

In the circumstances stated above, Government is pleased to release an amount of Rs.1.00 crore (Rupees One crore) only, out of the available funds under the head of account "5465-01-190-3-05-211 - Cost Sharing for New Projects – Investments (Plan)" and Rs.1.50 crores (Rupees One crore fifty lakhs) only out of the reapropriated funds from the major head of account "5465-Capital outlay on general financial and trading Institutions to the Head Account 5465-01-190-3-05-211 - Cost Sharing for New Project Investments (Plan)", thereby, totaling Rs.2.50 crores (Rupees Two crores and fifty lakhs) only towards "Cost Sharing Railway Projects" for Bangalore – Kengeri – Kengeri – Ramanagaram Doubling Railway Projects.

2. The M.D, iDeCK, is authorized to draw the amount on Payee's Receipt duly countersigned by the Deputy Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. This order issues with the concurrence of the Finance Department, vide its U.O. Note No. FD 1623/Exp-I/05 dated 14.11.2005 and in accordance with the Finance Department's sanction under G.O No. FD 357 BRS 2005 dated 14.11.2005.

By Order and in the name of the Governor of Karnataka,

**F.A. SHAIKH**

P.R. 1748

Deputy Secretary to Government

Infrastructure Development Department.

**FOREST,ECOLOGY AND ENVIRONMENT SECRETARIAT**

**Subject:** Diversion of 25 ha. of forest land in Sy.No.301 of Marihal and Karadiguddi Sy.No.180 in Nesargi Range of Belgaum Division for afforestation in favour of M/s Campbell Knitwear Limited, Belgaum.

**Read:**
1) Letter No.A5(2)GFL.CR.14/04-05 dated 25.10.2004 and 28.6.2005 of the Principal Chief Conservator of Forests, Bangalore.
2) State Government letter No.FEE 185 FLL 2004, dated :17.8.2005.
3) Government of India letter No. 4-KR C112/2005-BAN,dated 8-9-2005.

**PREAMBLE:**

The Principal Chief Conservator of Forests, Bangalore vide his letter dated 25.10.2004 has submitted a proposal to obtain the approval of Government of India for taking up afforestation in the 25.00 ha. of forest area at Marihal forest Sy.No.301 and Sy.No.180 of Karadiguddi in ;Nesargi Range of Belgaum Division by M/s Campbell Knitwear Limited who are running a Knitwear Factory at Marihal Village, Belgaum District subject to certain conditions.

The proposal was examined and State Government directed the Principal Chief Conservator of Forests to submit a revised proposal as per guidelines issued by Government of India for private sector participation in afforestation.

In response to this, the company has submitted a tri-partite agreement. M/s Forbes Campbell Knitwear Ltd., is an establishment of Forbes Gokak Ltd., producing lot of effluent and the same is treated at ETP and then let out. The company has proposed to use the treated effluent water for afforestation purpose. As per the guidelines of Government of India the company has signed an agreement with the BAIF Development Research Foundation, an NGO.

Accordingly, the proposal was recommended to Government of India, for approval vide State Government letter dated: 17.8.2005 read at (2) above.

The Government of India, Ministry of Environment and Forests, Regional Office, (Southern Zone), Bangalore vide their letter dated: 8-9-2005 read at (3) above have conveyed that afforestatin of degraded forest land is not a non forestry activity and as such would not attract the provisions of Forest (Conservation)Act, 1980. However, the provisions of the Act would come into operation if any clearing of the existing vegetation in the degraded forest land is involved.

In the instant case, approval for taking up the afforestation activity in the proposed Forest area may be given subject to the condition that the existing vegetation should not be cleared.

The proposal has been examined in detail and hence the order.

**GOVERNMENT OREDER NO. FEE 185 FLL 2004, BANGALORE, DATED: 13th DECEMBER 2005**

In the circumstances explained in the preamble above, Government are pleased to accord sanction for taking up afforestation in 25.00 ha. of forest area at Marihal Forest Sy.No.301 and Sy.No.180 of Karadigudda in Nesargi Range of Belgaum Division by M/s Forbes Campbell Knitwears, Belgaum subject to the following conditions:

1. The legal status of the forest land shall remain unchanged.
2. Planting should be done as approved by the Deputy Conservator of Forests, Belgaum.
3. The Company will not claim any right whatsoever over the forest land or the produce any time hereafter.
4. The rights of local people, if any over the forest land will not be affected by this agreement.
5. The agreement will be for the period of 7 years during which the area is likely to be tackled including maintenance.
6. The scheme should be prepared in such a way so that naturally occurring are given preference in the rehabilitation and even plantations should be of local species.
7. Only forest lands having crown density less than 0.4 and which can not be re-generated with natural re-generation should be taken up under this scheme. Natural growth shall not be disturbed.
8. Natural trees, saplings, root stock should not be removed while taking up the afforestation.
9. The success of the afforestation shall be reviewed at the 2$^{nd}$ year onward (every year) and if found non satisfactorily, the land shall be resumed back immediately and the cost incurred by the user agency will not be paid back.
10. The company should strictly adhere to the agreement.
11. There is a possibility that by using the treated affluent water the forest land may get degenerated if such changes are observed during the project period, the approval given may be withdrawn without giving any notice to the company and; no claim or cost whatsoever will be paid to the company.
12. M/s Campbell Knitwear Ltd., Belgaum and BAIF will not claim any right whatsoever over the forest land or forest produce at any time hereafter whatsoever.

13. Before handing over the forest land to Campbell Knitwear Ltd.-BAIF a tri-partite agreement MOU between Cambell Knitwear Ltd., BAIF and State Forest Department should Got executed. The agreement must have the commitment of M/s Campbell Knitwear ltd., to bear the cost of above mentioned reforestation scheme of the BAIF to faithfully implement the scheme under the supervision and direction of the State Forest Department.
14. Any other condition the Government of India/State Government and Principal Chief Conservator of Forests considers essential to fulfill objective and preamble of the guidelines may be imposed.

By Order and in the name of the Governor of Karnataka,

**S.R. VATSALA**

Under Secretary to Government,

Forest,Ecology and Environment Department.

P.R. 15

**Subject:** Diversion of 3.63 ha. of forest land for the purpose of establishment of 15 MW Mini Hydel Sheme in favour of M/s Bobba Power Project in Kundapur Division, Dakshina Kannada District.

**Read:**
1) Letter No. A5(3):GFL.5323/2003-04, Dated: 18.11.2004 of Principal Chief Conservator of Forests, Bangalore.
2) State Government letter No. FEE 199 FLL 2004, dated: 30.03.2005.
3) Letter No. 4-KR B082/2005-BAN/218, dated: 2.5.2005 of Government of India, Ministry of Environment and Forests, Regional Office(S.Z), Bangalore.
4) State Government letter No. FEE 199 FLL 2004, dated: 18.8.2005 and 15.9.2005.
5) Letter No. 4-KR B082/2005-BAN, dated: 16.11.2005 of Government of India, Ministry of Environment and Forests, Regional Office(S.Z), Bangalore.
6) State Government letter No. FEE 199 FLL 2004, dated: 26.11.2005.
7) Letter No. 4-KR B082/2005-BAN, dated: 13.12.2005 of Government of India, Ministry of Environment and Forests, Regional Office(S.Z), Bangalore.

**PREAMBLE:**

The Principal Chief Conservator of Forests, Bangalore in his letter dated 18.11.2004 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 3.63 ha. of deemed forest land in Sy.No.118 and 286/1 of Aramodi Village of Belthangadi Taluk and Sy.No.120/1 of Maroor Village of Mangalore Taluk across Puchamogaru river for Mini Hydel Project (excluding the river bed area) in favour of M/s Bobba Power Projects subject to certain conditions.

2. Accordingly, the proposal was recommended to Government of India for approval vide State Government letter dated 30.3.2005 read at(2) above.

3. The Government of India, Ministry of Environment and Forests, Bangalore vide their letter dated 2.5.2005 read at (3) above requested to furnish certain details regarding catchment area treatment plan and non avaialibility of non forest land for raising compensatory afforestation.

4. State Government in its letter referred at (4) above has submitted the additional information sought for from Government of India.

5. The Government of India, the Ministry of Environment and Forests, Bangalore agreed to the proposal in principle (Stage-I) under Section 2 of Forest (Conservation)Act,1980 vide their letter dated: 16.11.2005 read at (5) above, subject to fulfillment of certain conditions.

6. The Principal Chief Conservator of Forests submitted to compliance report vide their letter dated 23.11.2005 and the same has been sent to Government of India vide State Government letter dated: 26.11.2005 read at (6) above.

7. The Government of India, Ministry of Environment and Forests, Bangalore vide letter dated 13.12.2005 read at (7) above has conveyed its approval (Stage-II) under Section 2 of Forest (Conservation)Act, 1980 for diversion of 3.63 ha. of deemed forest land in Sy.No.118 and 286/1 of Aramodi Village of Belthangadi Taluk and Sy.No.120/1 of Maroor Village of Mangalore Taluk, Kundapura Division, D.K.District establishment of 15 MW Mini Hydel Scheme in favour of M/s Bobba Power Projects subject to certain conditions.

8. The proposal has been examined in detail and hence the order.

**GOVERNMENT ORDER NO. FEE 199 FLL 2004, BANGALORE, DATED: 26th DECEMBER 2005.**

In the Circumstances explained above in the preamble above Government are pleased to accord sanction under Section 2 of Forest (Conservation) Act, 1980 for diversion of 3.63 ha. of deemed forest land in Sy.No.118 and 286/1 of Aramodi Village of Belthangadi Taluk and Sy.No.120/1 of Maroor Village of Mangalore Taluk, Kundapura Division, D.K.District establishment of 15 MW Mini Hydel Scheme in favour of M/s Bobba Power Projects subject to the following terms and conditions:

1. The legal Status of the forest land shall remain unchanged.
2. The Compensatory afforestation shall be raised over 3.63 ha.of identified non-forest land at Survey No.15 and Sy.No.179 of Thodur Village, Mangalore Taluk at the cost of user agency. The State Government shall obtain prior permission of Central Government for change of location and schedule of compensatory afforestation site, if any.
3. The non-forest land for compensatory afforestation shall be notified as RF/PF under Indian Forest Act,1927 or the State Forest Act within a period of 6 months and the Nodal Officer(Forest Conservation) shall report the compliance with in 6 months.
4. The penal compensatory afforestation shall be raised over 7.26 ha. of degraded forest land at the cost of user agency.
5. The Catchment Area treatment works shall be executed as per the plan under the supervision of State Forest Department.
6. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004.
7. The State Government shall deposit the fund realized towards compensatory afforestation with the Compensatory Afforestation Fund Management and Planning Authority (CAMPA).
8. The total forest area utilized for the project shall not exceed 3.63 ha.
9. In case the land is not used for the stipulated purpose, then the area will be resumed by the State Forest Department.
10. The lease is for a period of 30 years.
11. Karnataka Forest Act 1963 and Rules 1969 will be applicable for any violation
12. The lessee shall pay the lease rent as fixed by the Government from time to time.
13. Only minimum number trees shall be cut based on actual establishing Mini Hydel Project.
14. The user agency shall pay the extraction charges of trees as estimated by the concerned Deputy Conservator of Forests from the proposed land.
15. Any violation other than the permitted conditions will be dealt under Karnataka Forest Act,Karnataka Forest Rules, Forest (Conservation)Act, 1980 and Forest (Conservation) Rules, 2003.
16. The water reservoir should be kept open for drinking purpose to Wild animals.
17. No labour houses/huts will be allowed to establish at any part of time in the project area and also around the project.
18. The land shall utilized for the stipulated ed purpose for which it is released.
19. If the land is not utilized for the purpose within 2 years and also if any violation is found of the stipulated conditions, the forest land shall be forfeited to Department after due approval from Government by the Conservator of Forests under section 82 (read with section 69 of Karnataka Forest Rules) of Karnataka Forest Act 1963.
20. The user agency shall abide by all the conditions imposed upon by Government of India, Government of Karnataka and Principal Chief Conservator of Forests, Bangalore.
21. Any other condition to be stipulated by State Government/ Government of India/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**S.R. VATSALA**

P.R. 44

Under Secretary to Government,

Forest,Ecology and Environment Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ನಿವೃತ್ತ ಮನೋರೋಗಶಾಸ್ತ್ರ ಪ್ರಾಧ್ಯಾಪಕರಾದ ಡಾ:ಎಸ್.ಕೆ.ಸುಬ್ಬೇಗೌಡ ರವರ ವಿರುದ್ಧ ಲೋಕಾಯುಕ್ತ ಟ್ರ್ಯಾಪ್ ಪ್ರಕರಣ.

**ಓದಲಾಗಿದೆ:** 1) ತಾ:16-03-2005 ಸಂಖ್ಯೆ:ಆಕುಕ 31 ಎಂಎಂಸಿ 2005ರ 2ನೇ ಕಾರಣ ಕೇಳುವ ನೋಟೀಸು.

2) ತಾ: 23-04-2005ರ ಡಾ:ಎಸ್.ಕೆ.ಸುಬ್ಬೇಗೌಡರವರ ಹೇಳಿಕೆ ತಾ:23-12-2004 ಸಂಖ್ಯೆ:

**ಪ್ರಸ್ತಾವನೆ:**

1) ಮೈಸೂರು ವೈದ್ಯಕೀಯ ಕಾಲೇಜಿನ ನಿವೃತ್ತ ಮನೋರೋಗಶಾಸ್ತ್ರ ಪ್ರಾಧ್ಯಾಪಕರಾದ ಡಾ:ಎಸ್.ಕೆ.ಸುಬ್ಬೇಗೌಡರವರು ತಾ:13-04-1999 ರಂದು ಶ್ರೀ ಮಂಜುನಾಥ ಎಂಬುವವರಿಂದ ರೂ.1000 ಗಳ ಲಂಚ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಬಿದ್ದಿದ್ದರು. 1957ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ 11 ಮತ್ತು 11ಎ ನಿಯಮದಡಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತರಿಗೆ ವಹಿಸಲಾಗಿತ್ತು. ತಾ:13-05-2005ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಲಾಗಿದೆ. ವಿಚಾರಣಾ ವರದಿಯಲ್ಲಿನ ಮುಖ್ಯಾಂಶ ಈ ಮುಂದಿನಂತಿದೆ.

2) ಸರ್ಕಾರಿ ಆದೇಶ ಸಂಖ್ಯೆ: ಆಕುಕ 127 ಎಂಎಂಸಿ 99, ದಿನಾಂಕ 05-07-2003 ಮತ್ತು ಮಾನ್ಯ ಲೋಕಾಯುಕ್ತ/ ಉಪಲೋಕಾಯುಕ್ತರವರ ಆದೇಶ ಸಂಖ್ಯೆ: ಎಲ್ಒಕೆ/ಐಎನ್‌ಕ್ಯೂ/73/14-ಎ/2003-04 ದಿನಾಂಕ 28-08-2003ರನ್ವಯ ಲೋಕಾಯುಕ್ತ ಕಛೇರಿಯ ಅಪರ ನಿಬಂಧಕರು (ವಿಚಾರಣೆ-3) ರವರನ್ನು ಆಪಾದಿತ ಅಧಿಕಾರಿಯ ವಿರುದ್ಧ ವಿಚಾರಣೆ ಕೈಗೊಳ್ಳಲು ವಿಚಾರಣಾಧಿಕಾರಗಳನ್ನಾಗಿ ನೇಮಿಸಿ ಆದೇಶಿಸಲಾಗಿದೆ.

3) ಫಿರ್ಯಾದುದಾರರಾದ ದಿವಂಗತ ಮಂಜುನಾಥ್ ರವರಿಗೆ ಆಪಾದಿತ ಅಧಿಕಾರಿಯು ಚಿಕಿತ್ಸೆ ನೀಡುವ ಸಂಬಂಧ ರೂ.1,000/- ಗಳ ಲಂಚವನ್ನು ಪಡೆದಿರುವುದು ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966ರ ನಿಯಮ 3 (1) ಮತ್ತು (2) ರ ವ್ಯಾಪ್ತಿಗೆ ಒಳಪಡುತ್ತದೆ.

4) ಆಪಾದಿತ ಅಧಿಕಾರಿಯ ಮೇಲೆ ಹೊರೆಸಲಾದ ಆರೋಪಗಳು ಕೆಳಕಂಡಂತಿರುತ್ತದೆ.

"ಡಾ: ಎಸ್.ಕೆ.ಸುಬ್ಬೇಗೌಡರವರಾದ ನೀಡುವ ಮೈಸೂರಿನ ಕೆ.ಆರ್.ಆಸ್ಪತ್ರೆಯಲ್ಲಿ ಸೈಕ್ಯಾಟ್ರಿ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಫಿರ್ಯಾದುದಾರರಾದ ದಿ:ಮಂಜುನಾಥ್ ಬಿನ್ ದಿ:ಚನ್ನಲಿಂಗೇಗೌಡ ಸಾ: ಕಡತನಾಳು ಗ್ರಾಮ, ಶ್ರೀರಂಗಪಟ್ಟಣ ತಾ:, ಮಂಡ್ಯ ಜಿಲ್ಲೆ ಇವರಿಗೆ ವಿಶೇಷ ಚಿಕಿತ್ಸೆ ನೀಡುವ ಸಂಬಂಧ ರೂ.1,000/-ಗಳ ಲಂಚವನ್ನು ಕೇಳಿ ಪಡೆದಿರುತ್ತೀರಿ. ತಮ್ಮ ಈ ನಡತೆಯು ದುರ್ನಡತೆಯಾಗಿದ್ದು, ತಾವು ಸರ್ಕಾರಿ ನೌಕರರಾಗಲು ಅನರ್ಹರಾಗಿರುತ್ತೀರಿ ಮತ್ತು ಇದರಿಂದಾಗಿ ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966ರ ನಿಯಮ 3 (1) ಮತ್ತು (2) ರ ಪ್ರಕಾರ ದುರ್ನಡತೆಯಿಂದಾಗಿ ದೋಷಿಯಾಗಿರುತ್ತೀರಿ."

5) ಡಾ:ಎಸ್.ಕೆ.ಸುಬ್ಬೇಗೌಡರವರ ವಿರುದ್ಧದ ಆರೋಪದ ಮೇಲೆ ನಿಯಮಾನುಸಾರ ಲೋಕಾಯುಕ್ತರವರು ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯಲ್ಲಿ ಆಪಾದಿತ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿರುವುದಾಗಿ ಖಚಿತ ಪಡಿಸಲಾಗಿದೆ.

6) ಲೋಕಾಯುಕ್ತರ ವಿಚಾರಣಾ ವರದಿಯನ್ನು ಸರ್ವ ಕೋನಗಳಿಂದ ಪರಿಶೀಲಿಸಲಾಗಿದ್ದು, ಸದರಿ ವರದಿಯಲ್ಲಿನ ಶಿಫಾರಸ್ಸನ್ನು ಸರ್ಕಾರವು ಅಂಗೀಕರಿಸಲು ನಿರ್ಣಯಿಸಿ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11-ಎ ರಡಿ ಸದರಿ ವಿಚಾರಣಾ ವರದಿಯಲ್ಲಿನ ಸನ್ನಿವೇಶ ಮತ್ತು ವಾಸ್ತವಿಕತೆಯನ್ನು ಪರಿಶೀಲಿಸಿ ಡಾ:ಎಸ್.ಕೆ.ಸುಬ್ಬೇಗೌಡರವರ ದುರ್ನಡತೆಯು ಸಕಲ ಕೋನಗಳಿಂದ ಸಾಬೀತಾಗಿದೆ ಎಂದು ಪರಿಗಣಿಸಿ ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001 ದಿನಾಂಕ 14-09-2001ರಲ್ಲಿನ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

7) ಈ ದಿಸೆಯಲ್ಲಿ ನಿಯಮಾನುಸಾರ ಕರ್ನಾಟಕ ಲೋಕ ಸೇವಾ ಆಯೋಗದೊಂದಿಗೆ ಸಮಾಲೋಚಿಸಲಾಗಿ ಸದರಿ ಆಯೋಗವು ಪತ್ರ ಸಂಖ್ಯೆ: ಪಿಎಸ್‌ಇ 80 ಸಿಎನ್‌ಎಸ್ 2005 ದಿನಾಂಕ 29-08-2005ರಲ್ಲಿ ಆಪಾದಿತ ಅಧಿಕಾರಿಯ ಅಂದರೆ, ಮೈಸೂರು ವೈದ್ಯಕೀಯ ಕಾಲೇಜಿನ ಮನೋರೋಗ ಶಾಸ್ತ್ರದಲ್ಲಿ ಪ್ರಾಧ್ಯಾಪಕರಾದ ಡಾ:ಎಸ್.ಕೆ.ಸುಬ್ಬೇಗೌಡರವರು ಪಡೆಯುವ ಒಟ್ಟು ಪಿಂಚಣಿಯಲ್ಲಿ ಶೇ.30 ರಷ್ಟು ಪಿಂಚಣಿಯನ್ನು ಶಾಶ್ವತವಾಗಿ ತಡೆ ಹಿಡಿಯಲು ಸಹಮತಿ ನೀಡಿರುತ್ತದೆ.

8) ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 31 ಎಂಎಂಸಿ 2005, ಬೆಂಗಳೂರು, ದಿನಾಂಕ 30ನೇ ನವೆಂಬರ್ 2005**

ಮೈಸೂರು ವೈದ್ಯಕೀಯ ಕಾಲೇಜಿನ ಮನೋರೋಗ ಶಾಸ್ತ್ರದಲ್ಲಿ ಪ್ರಾಧ್ಯಾಪಕರಾದ ಡಾ:ಎಸ್.ಕೆ.ಸುಬ್ಬೇಗೌಡರವರು ದಿನಾಂಕ: 31-03-2001ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ಮೇರೆಗೆ ಅವರ ವಿರುದ್ಧ ಯಾವುದೇ ದಂಡನೆಯನ್ನು ವಿಧಿಸಲು ಅವಕಾಶವಿರುವುದಿಲ್ಲ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 214(1)(ಎ)ರಡಿ ಸದರಿ ಅಧಿಕಾರಿಯ ನಿವೃತ್ತಿ ವೇತನದಲ್ಲಿ ಶೇ.30ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

ಪಿ.ಆರ್. 26

**ವಿಷಯ:** ನೂತನ ವೈದ್ಯಕೀಯ ಕಾಲೇಜುಗಳ ಪ್ರಗತಿ ಬಗ್ಗೆ ಸ್ಥಳ ವೀಕ್ಷಣೆ – ಕುರಿತು.

**ಓದಲಾಗಿದೆ:**
1) ದಿನಾಂಕ 22–01–2005 ಸರ್ಕಾರಿ ಆದೇಶ ಸಂಖ್ಯೆ:ಆಕುಕ 516 ಎಂಪಿಎಸ್ 2004.
2) ದಿನಾಂಕ 15–02–2005 ಸರ್ಕಾರಿ ಆದೇಶ ಸಂಖ್ಯೆ:ಆಕುಕ 55 ಎಂಪಿಎಸ್ 2005.
3) ದಿನಾಂಕ 15–06–2005ರಂದು ಭಾರತ ಸರ್ಕಾರಕ್ಕೆ ಎಂ.ಸಿ.ಐ. ಬರೆದ ಪತ್ರ ಸಂಖ್ಯೆ: ಎಂಸಿಐ–34(41)/2005–ಎಂಇಡಿ/6455.
4) ಭಾರತ ಸರ್ಕಾರದ ಪತ್ರ ಸಂಖ್ಯೆ: ಯು.12012/92/2004–ಎಂಇ(ಪಿ–11), ದಿನಾಂಕ 20–06–2005.
5) ದಿನಾಂಕ 06–07–2005 ಸರ್ಕಾರದ ಪತ್ರ ಸಂಖ್ಯೆ:ಆಕುಕ 55 ಎಂಪಿಎಸ್ 2005.
6) ದಿನಾಂಕ 11–07–2005ರಂದು ಭಾರತ ಸರ್ಕಾರಕ್ಕೆ ಎಂ.ಸಿ.ಐ. ಬರೆದ ಪತ್ರ ಸಂಖ್ಯೆ: ಎಂಸಿಐ–34(41)/2005–ಎಂಇಡಿ/8107.
7) ಭಾರತ ಸರ್ಕಾರದ ಪತ್ರ ಸಂಖ್ಯೆ: ಯು.12012/92/04–ಎಂಇ(ಪಿ–11), ದಿನಾಂಕ 03–08–2005.
8) ಭಾರತ ಸರ್ಕಾರದ ಪತ್ರ ಸಂಖ್ಯೆ: ಯು.12012/92/04–ಎಂಇ(ಪಿ.11), ದಿನಾಂಕ 26/29–09–2005.

**ಪ್ರಸ್ತಾವನೆ:**

1) ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಬೀದರ್, ಬೆಳಗಾಂ ರಾಯಚೂರು, ಹಾಸನ, ಮಂಡ್ಯ ಮತ್ತು ಶಿವಮೊಗ್ಗದಲ್ಲಿ ನೂತನ ಸರ್ಕಾರಿ ವೈದ್ಯಕೀಯ ಕಾಲೇಜುಗಳ ಸ್ಥಾಪನೆಗೆ ಮಂಜೂರಾತಿಯನ್ನು ನೀಡಲಾಗಿತ್ತು. ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ ಸದರಿ ನೂತನ ಕಾಲೇಜುಗಳನ್ನು ಪ್ರಾರಂಭಿಸಲು, ಪ್ರಗತಿಯ ಬಗ್ಗೆ ಪರಿಶೀಲನೆ ನಡೆಸಲು ಒಂದು ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗಿತ್ತು. ನಂತರ ಎಂ.ಸಿ.ಐ.ಯು ಸದರಿ ನೂತನ ಕಾಲೇಜುಗಳ ಸ್ಥಳ ಪರಿಶೀಲನೆ ನಡೆಸಿ ಉಲ್ಲೇಖ (3)ರ ಪತ್ರದಲ್ಲಿ ಭಾರತ ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಿ, ಸದರಿ ಕಾಲೇಜುಗಳ ಸ್ಥಳ ಪರಿಶೀಲನೆಯಲ್ಲಿ ಕಂಡು ಬಂದ ನ್ಯೂನತೆಗಳನ್ನು ಹಾಗೂ ಇನ್ನಿತರೆ ಕೊರತೆಗಳ ಹಿನ್ನಲೆಯಲ್ಲಿ ಹೊಸ ಕಾಲೇಜುಗಳನ್ನು ಪ್ರಾರಂಭಿಸಲು ಅನುಮತಿಯನ್ನು ನಿರಾಕರಿಸಿರುತ್ತದೆ.

2) ಉಲ್ಲೇಖ (4)ರ ಪತ್ರದಲ್ಲಿ ಭಾರತ ಸರ್ಕಾರವು ಉಲ್ಲೇಖ (3)ರ ಪತ್ರವನ್ನು ಲಗತ್ತಿಸಿ, ಸದರಿ ವಿಷಯದಲ್ಲಿ ಮುಂದಿನ ಕ್ರಮ ತೆಗೆದುಕೊಳ್ಳಲು ಎಂ.ಐ.ಸಿ. ಯು ವರದಿ ಮಾಡಿರುವ ನ್ಯೂನತೆಯ ಅಂಶಗಳಿಗೆ ಸರ್ಕಾರದ ಅನುಸರಣಾ ವರದಿಯನ್ನು ಶೀಘ್ರವಾಗಿ ಸಲ್ಲಿಸುವಂತೆ ಸೂಚಿಸಿತ್ತು. ಅದರಂತೆ ಉಲ್ಲೇಖ (5)ರ ಪತ್ರದನ್ವಯ ಸರ್ಕಾರವು ತನ್ನ ಅನುಸರಣಾ ವರದಿಯನ್ನು ಭಾರತ ಸರ್ಕಾರಕ್ಕೆ ಸಲ್ಲಿಸಿತು. ಸದರಿ ಅನುಸರಣಾ ವರದಿಯನ್ನು ಭಾರತ ಸರ್ಕಾರವು ಎಂ.ಸಿ.ಐ. ಗೆ ಸಲ್ಲಿಸಿದ್ದಾಗ್ಯೂ, ಸದರಿ ವರದಿಯಲ್ಲಿ, ಎಂ.ಐ.ಸಿ.ಯು ಮಾಡಿರುವ ನ್ಯೂನತೆಯ ಅಂಶಗಳು ಇನ್ನು ಹಾಗೆಯೇ ಇದ್ದು ನೂತನ ಕಾಲೇಜುಗಳನ್ನು ಪ್ರಾರಂಭಿಸುವ ಪ್ರಸ್ತಾವನೆಗೆ ಅನುಮೋದನೆಯನ್ನು ಉಲ್ಲೇಖ ಪತ್ರ (6)ರಲ್ಲಿ ನಿರಾಕರಿಸಿರುತ್ತದೆಂದು ಭಾರತ ಸರ್ಕಾರವು ಉಲ್ಲೇಖ ಪತ್ರ (7)ರಲ್ಲಿ ಸರ್ಕಾರಕ್ಕೆ ತಿಳಿಸುವುದರ ಜೊತೆಗೆ, 2005–06ನೇ ಶೈಕ್ಷಣಿಕೆ ಸಾಲಿಗೆ ಹೊಸ ಕಾಲೇಜುಗಳನ್ನು ಪ್ರಾರಂಭಿಸಲು ಅನುಮತಿ ನೀಡಲು ದಿನಾಂಕ 15–07–2005 ಕೊನೆಯ ದಿನವಾಗಿದ್ದು, ಎಂ.ಐ.ಸಿ.ಯು ತನ್ನ ವರದಿಯಲ್ಲಿ ಮಾಡಿರುವ ನ್ಯೂನತೆಯ ಅಂಶಗಳಿಗೆ ಸರ್ಕಾರವು ಅನುಸರಣಾ ವರದಿಯನ್ನು ಈಗ ಸಲ್ಲಿಸಿದಲ್ಲಿ, ಅದನ್ನು 2006–07ನೇ ಶೈಕ್ಷಣಿಕೆ ಸಾಲಿಗೆ ಹೊಸ ಕಾಲೇಜುಗಳನ್ನು ಪ್ರಾರಂಭಿಸಲು ಪರಿಗಣಿಸಲಾಗುವುದೆಂದು ತಿಳಿಸಿರುತ್ತದೆ.

3) ಎಂ.ಸಿ.ಐ.ಯು ತನ್ನ ವರದಿಯಲ್ಲಿ ಮಾಡಿರುವ ನ್ಯೂನತೆಯ ಅಂಶಗಳನ್ನು ಸರ್ಕಾರವು ಸಮಗ್ರವಾಗಿ ಪರಿಶೀಲಿಸಿ ತನ್ನ ಅನುಸರಣಾ ವರದಿಯನ್ನು ಪುನ: ಭಾರತ ಸರ್ಕಾರಕ್ಕೆ ಸಲ್ಲಿಸಿ ಹೊಸ ಕಾಲೇಜುಗಳ ಪ್ರಾರಂಭಕ್ಕೆ ಅನುಮತಿ ಕೋರುವ ಸಲುವಾಗಿ, ಬೀದರ್, ಬೆಳಗಾಂ ರಾಯಚೂರು, ಹಾಸನ, ಮಂಡ್ಯ ಮತ್ತು ಶಿವಮೊಗ್ಗದಲ್ಲಿ ನೂತನ ವೈದ್ಯಕೀಯ ಕಾಲೇಜುಗಳ ಪ್ರಗತಿ, ಸಲಕರಣೆಗಳ ಖರೀದಿ, ಸಿಬ್ಬಂದಿಯ ನೇಮಕಾತಿ ಮತ್ತು ಇತರೆ ವಿಷಯಗಳನ್ನು ಪರಿಶೀಲಿಸಲು ಕೆಲವು ಅಧಿಕಾರಿಗಳನ್ನು ನೇಮಿಸಿ ವರದಿ ಪಡೆಯಲು ಸರ್ಕಾರವು ತೀರ್ಮಾನಿಸಿರುತ್ತದೆ.

4) ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 338 ಎಂಪಿಎಸ್ 2005, ಬೆಂಗಳೂರು, ದಿನಾಂಕ 21ನೇ ನವೆಂಬರ್ 2005**

ಈ ಕೆಳಕಂಡ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಾಲೇಜುಗಳ ಪ್ರಗತಿಯನ್ನು ಮೇಲಿಂದ ಮೇಲೆ ಪರಿಶೀಲಿಸಿ ಸರ್ಕಾರಕ್ಕೆ ತಮ್ಮ ವರದಿಯನ್ನು ಸಲ್ಲಿಸಲು ಸೂಚಿಸಿದೆ.

1) ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ – ಹಾಸನ ಮತ್ತು ಬೆಳಗಾವಿ
2) ಸರ್ಕಾರದ ಜಂಟಿಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ – ಬೀದರ್ ಮತ್ತು ಶಿವಮೊಗ್ಗ
3) ಮುಖ್ಯ ಆಡಳಿತಾಧಿಕಾರಿ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು – ಮಂಡ್ಯ ಮತ್ತು ರಾಯಚೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 31

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಂವ್ಯಶಾಇ 66 ಸಂವ್ಯವಿ 2005, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2005**

**ವಿಷಯ:** ಉತ್ತರ ಕರ್ನಾಟಕದ ಪ್ರದೇಶದಲ್ಲಿ ವಿಧಾನಸಭೆ / ವಿಧಾನಪರಿಷತ್ ಅಧಿವೇಶನ ನಡೆಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 66 ಸಂವ್ಯವಿ 2005, ಬೆಂಗಳೂರು, ದಿನಾಂಕ: 09.12.2005.

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಿತ ಪತ್ರಕ್ಕೆ ಸಂಬಂಧಿಸಿದಂತೆ, ಉತ್ತರ ಕರ್ನಾಟಕ ಪ್ರದೇಶದಲ್ಲಿ ವಿಧಾನ ಸಭೆ / ವಿಧಾನ ಪರಿಷತ್ ಅಧಿವೇಶನವನ್ನು ನಡೆಸುವ ಬಗ್ಗೆ ಯಾವುದೇ ಆಕ್ಷೇಪಣೆ ಅಥವಾ ಸಲಹೆಗಳಿದ್ದರೆ **secy-dpal@karnataka.gov.in** ಎಂಬ ವೆಬ್‌ಸೈಟ್

ಮೂಲಕವಾಗಲಿ ಅಥವಾ ಈ ಕೆಳಕಂಡ ವಿಳಾಸಕ್ಕೆ ಪತ್ರ ಅಥವಾ ಫ್ಯಾಕ್ಸ್ ಕಳುಹಿಸುವುದರ ಮೂಲಕ ಬರೆಯಬೇಕೆಂದು ಈ ಮೂಲಕ ಸಾರ್ವಜನಿಕರಲ್ಲಿ ಕೋರಲಾಗಿದೆ.

ಶ್ರೀ ಜಿ.ಕೆ. ಬೋರೇಗೌಡ,
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ,
ವಿಧಾನ ಸೌಧ, ಬೆಂಗಳೂರು.
ದೂರವಾಣಿ ಸಂಖ್ಯೆ: 22254445
ಫ್ಯಾಕ್ಸ್ ಸಂಖ್ಯೆ: 22353109

**ಬಿ.ಜಿ. ಶ್ಯಾಮಲ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ವಿಷಯ:** ಉತ್ತರ ಕರ್ನಾಟಕದ ಪ್ರದೇಶದಲ್ಲಿ ವಿಧಾನಮಂಡಲದ ಅಧಿವೇಶನ ನಡೆಸುವ ಕುರಿತು.
**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಪಿ ಎಸ್ ಸಿ ಎಂ:5711/2005, ದಿನಾಂಕ:6.9.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ವಿಧಾನಮಂಡಲ ಅಧಿವೇಶನ ನಡೆಸುವ ಕುರಿತು ಅಧಿಕಾರಿಗಳ ಸಮಿತಿಯನ್ನು ರಚಿಸಲು ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿದ್ದಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 66 ಸಂವ್ಯವಿ 2005, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2005**

ರಾಜ್ಯ ವಿಧಾನಮಂಡಲದ ಅಧಿವೇಶನವನ್ನು ಉತ್ತರ ಕರ್ನಾಟಕದ ಭಾಗದಲ್ಲಿ ನಡೆಸಲು, ಸಮೀಕ್ಷೆ ಮತ್ತು ವರದಿ ನೀಡಲು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ಈ ಕೆಳಕಂಡಂತೆ ಅಧಿಕಾರಿಗಳ ಸಮಿತಿಯನ್ನು ರಚಿಸಿದೆ.

1. ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ --- ಅಧ್ಯಕ್ಷರು
2. ಹೆಚ್ಚುವರಿ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ. --- ಸದಸ್ಯರು
3. ಜಂಟಿ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ. --- ಸದಸ್ಯರು

ಸಮಿತಿಗೆ ಈ ಕೆಳಗೆ ನಮೂದಿಸಿದ ಕಾರ್ಯಗಳನ್ನು ವಹಿಸಲಾಗಿದೆ.

(1) ಬೆಳಗಾವಿ ಮತ್ತು ಗುಲ್ಬರ್ಗ ನಗರಗಳಿಗೆ ಭೇಟಿ ಕೊಟ್ಟು ಅಲ್ಲಿನ ಸ್ಥಳೀಯ ಅಧಿಕಾರಿಗಳೊಂದಿಗೆ ಸಮಾಲೋಚಿಸಿ ಸಮೀಕ್ಷೆ ನಡೆಸುವುದು;
(2) ಅಧಿವೇಶನವನ್ನು ನಡೆಸಲು ಇರುವ ಸ್ಥಳಾವಕಾಶ ಸದಸ್ಯರಿಗೆ/ಅಧಿಕಾರಿಗಳಿಗೆ ಅಧಿವೇಶನ ಸಮಯದಲ್ಲಿ ತಂಗುವ ವ್ಯವಸ್ಥೆ ಹಾಗೂ ಮೂಲಭೂತ ಸೌಕರ್ಯಗಳ ಬಗ್ಗೆ ಸ್ಥಳಾವಲೋಕನ ಮತ್ತು ಸಮಾಲೋಚನೆ ನಡೆಸುವುದು;
(3) ಅಧಿವೇಶನ ನಡೆಸುವ ಸಾಧ್ಯತೆಗಳ ಬಗ್ಗೆ ಸಮಾಲೋಚಿಸಿ ವರದಿ ನೀಡುವುದು ಹಾಗೂ ಕಾರ್ಯ ಯೋಜನೆಯನ್ನು ಸೂಚಿಸುವುದು;
(4) ಸೌಕರ್ಯಗಳು ಲಭ್ಯವಿಲ್ಲದ ಸಂದರ್ಭಗಳಲ್ಲಿ ಅವುಗಳನ್ನು ಒದಗಿಸುವ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ನೀಡುವುದು;
(5) ಸಮಿತಿಯ ಒಂದು ತಿಂಗಳೊಳಗಾಗಿ ಸಮೀಕ್ಷೆ, ಅಧ್ಯಯನ ಕೈಗೊಂಡು ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಸಮಿತಿಯು ವಿಧಾನ ಸಭೆಯ ಸಚಿವಾಲಯದಿಂದ ಒಬ್ಬರು ವರದಿಗಾರರು/ಶೀಘ್ರಲಿಪಿಗಾರರನ್ನು ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ವಿಷಯ:** ಉತ್ತರ ಕರ್ನಾಟಕದ ಪ್ರದೇಶದಲ್ಲಿ ವಿಧಾನ ಸಭೆ/ವಿಧಾನ ಪರಿಷತ್ ಅಧಿವೇಶನ ನಡೆಸುವ ಕುರಿತು.
**ಓದಲಾಗಿದೆ:** (1) ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಟಿಪ್ಪಣಿ ದಿನಾಂಕ:2.9.2005.
(2) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಪಿ ಎಸ್ ಸಿ ಎಂ:5711/2005, ದಿನಾಂಕ:24.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಕರ್ನಾಟಕ ಏಕೀಕರಣದ ನಂತರದಲ್ಲಿ ಸರ್ಕಾರ ನಿರ್ವಹಿಸಬೇಕಾಗಿ ಬಂದ ಸಮಸ್ಯೆಗಳಲ್ಲಿ ಉತ್ತರ ಕರ್ನಾಟಕದ ಪ್ರಾದೇಶಿಕ ಅಸಮತೋಲನ ಪ್ರಮುಖವಾದ ವಿಷಯವಾಗಿದೆ. ಈ ಭಾಗದ ಪ್ರದೇಶಗಳು ಹಲವು ಕ್ಷೇತ್ರಗಳಲ್ಲಿ ಹಿಂದುಳಿದಿರುವ ವಿಷಯ ಸರ್ವಮಾನ್ಯವಾಗಿದೆ. ಭೌತಿಕ ಅನಾನುಕೂಲತೆ ಮತ್ತು ಸವಲತ್ತುಗಳ ಕೊರತೆ ಈ ಅಸಂತೃಪ್ತಿಗೆ ಕಾರಣವೆಂದು ಮೇಲ್ನೋಟಕ್ಕೆ ಅನಿಸಿದರೂ ಪುರೋಭಿವೃದ್ಧಿ ಯೋಜನೆಗಳಲ್ಲಿ ಸರ್ಕಾರ ತಮ್ಮನ್ನು ಪರಿಣಾಮಕಾರಿಯಾಗಿ ತೊಡಗಿಸಿಕೊಳ್ಳಲಿಲ್ಲವೆಂಬ ಭಾವನೆಯನ್ನು ಈ ಭಾಗದ ಜನತೆ ಆಗಿಂದಾಗ್ಗೆ ವ್ಯಕ್ತಪಡಿಸುತ್ತಾ ಬಂದಿದ್ದಾರೆ.

ವಾಸ್ತವವಾಗಿ ನೋಡುವುದಾದರೆ ಮೂಲಭೂತ ಸೌಕರ್ಯ, ಸವಲತ್ತುಗಳನ್ನು ಉತ್ತರ ಕರ್ನಾಟಕ ಭಾಗದ ಜನತೆ ಕೇಳುತ್ತಿರುವುದು ಐಕ್ಯತಾಭಾವದ ಮಾನದಂಡದ ರೂಪದಲ್ಲಿ ಮಾತ್ರ. ಈ ಸವಲತ್ತು ಗಳಿದ್ದರೆ ತಮ್ಮ ಸಾಮಾಜಿಕ ಸ್ಥಾನಮಾನಗಳು ಹೆಚ್ಚಬಹುದಾಗಿದೆ ಎಂಬ ಅವರ ಭಾವನೆ ಸಹಜವಾಗಿದೆ.

ಈ ಹಿನ್ನೆಲೆಯಲ್ಲಿ ರಾಜ್ಯ ವಿಧಾನ ಮಂಡಲದ ಅಧಿವೇಶನಗಳನ್ನು ಉತ್ತರ ಕರ್ನಾಟಕದ ಸ್ಥಳಗಳಲ್ಲಿಯೂ ನಡೆಸುವುದು ಒಂದು ಮಹತ್ವದ ಹೆಜ್ಜೆಯಾಗಬಹುದಾಗಿದೆ. ಈ ಕುರಿತಾಗಿ ರಾಜ್ಯ ವಿಧಾನ ಮಂಡಲದ ಉಭಯ ಸದನಗಳಲ್ಲಿ ಹಲವಾರು ಬಾರಿ ಚರ್ಚೆ ನಡೆದಿದ್ದು, ಜನಪ್ರತಿನಿಧಿಗಳು ತಮ್ಮದೆ ರೀತಿಯಲ್ಲಿ ಈ ಒತ್ತಾಸೆ ವ್ಯಕ್ತ ಮಾಡಿದ್ದಾರೆ. ಅಧಿವೇಶನ ಈ ಭಾಗದಲ್ಲಿ ನಡೆಸುವುದರಿಂದ ರಾಜ್ಯದ ಚಿಂತನೆ, ಯೋಜನೆಗಳು ಈ ಭಾಗದ ಜನರಿಗೆ ನೇರವಾಗಿ ವೇದ್ಯವಾಗ ಬಹುದಾಗಿದೆ. ಇದರಿಂದ ಸರ್ಕಾರದ ಸಂಕಷ್ಟಗಳೂ ಅವರಿಗೆ ತಿಳಿಯುವಂತಾಗುತ್ತದೆ. ಸರ್ಕಾರಿ ಆಡಳಿತ ಕಾರ್ಯಗಳಲ್ಲಿ ಈ ಭಾಗದ ಜನತೆಯ ಸಂಪೂರ್ಣ ಸಹಕಾರ ದೊರೆಯುವಂತಾಗಲು ಈ ಕ್ರಮ ಅವಶ್ಯಕವಾಗಬಹುದಾಗಿದೆ.

ಮೇಲ್ಕಾಣಿಸಿದ ಚಿಂತನೆಯನ್ನು ಕಾರ್ಯರೂಪಕ್ಕೆ ತರುವ ದಿಶೆಯಲ್ಲಿ ಅದರ ಪೂರ್ವಾಪರ ಹಾಗೂ ಸಾಧ್ಯಾಸಾಧ್ಯತೆಗಳನ್ನು ತಿಳಿಯಲು ಅಧ್ಯಯನ ಸಮಿತಿಯನ್ನು ರಚಿಸುವುದು ಅಗತ್ಯವಾಗಿದೆ. ಇಂಥಹ ಅಧ್ಯಯನ ಸಮಿತಿಗೆ ಈ ಕೆಳಗಿನಂತೆ ಕಾರ್ಯಗಳನ್ನು ವಹಿಸಬಹುದಾಗಿದೆ.

(1) ಬೆಳಗಾವಿ ಮತ್ತು ಗುಲ್ಬರ್ಗ ನಗರಗಳಿಗೆ ಸಮಿತಿ ಭೇಟಿ ಕೊಟ್ಟು ಅಲ್ಲಿನ ಸ್ಥಳೀಯ ಅಧಿಕಾರಿಗಳೊಂದಿಗೆ ಸಮಾಲೋಚಿಸಿ ಸಮೀಕ್ಷೆ ನಡೆಸುವುದು;

(2) ಈ ಸ್ಥಳಗಳಲ್ಲಿ ಅಧಿವೇಶನಗಳನ್ನು ನಡೆಸಲು ಇರುವ ಸ್ಥಳಾವಕಾಶ, ಸದಸ್ಯರಿಗೆ/ ಅಧಿಕಾರಿಗಳಿಗೆ ಅಧಿವೇಶನ ಸಮಯದಲ್ಲಿ ತಂಗುವ ವ್ಯವಸ್ಥೆ ಹಾಗೂ ಮೂಲಭೂತ ಸೌಕರ್ಯಗಳ ಬಗ್ಗೆ ಸ್ಥಳಾವಲೋಕನ ಮತ್ತು ಸಮಾಲೋಚನೆ ನಡೆಸುವುದು;

(3) ಅಧಿವೇಶನ ನಡೆಸುವ ಸಾಧ್ಯತೆಗಳ ಬಗ್ಗೆ ಸಮಾಲೋಚಿಸಿ ವರದಿ ಮಾಡುವುದು ಹಾಗೂ ಕಾರ್ಯ ಯೋಜನೆಯನ್ನು ಸೂಚಿಸುವುದು;

(4) ಸೌಕರ್ಯಗಳು ಲಭ್ಯವಿಲ್ಲದ ಸಂದರ್ಭಗಳಲ್ಲಿ ಅವುಗಳನ್ನು ಒದಗಿಸುವ ಬಗ್ಗೆ ಸರ್ಕಾರಕ್ಕೆ ಸಲಹೆ ಸೂಚನೆಗಳನ್ನು ನೀಡುವುದು;

(5) ಸಮಿತಿ ಅಸ್ಥಿತ್ವಕ್ಕೆ ಬಂದ ಒಂದು ತಿಂಗಳೊಳಗಾಗಿ ಸಮೀಕ್ಷೆ, ಅಧ್ಯಯನ ಕೈಗೊಂಡು ಸರ್ಕಾರಕ್ಕೆ ವರದಿ ಸಲ್ಲಿಸುವುದು;

ಮೇಲಿನಂತೆ ಸಮಿತಿ ರಚನೆ ಮಾಡಿ ಅದಕ್ಕೆ ನಿರ್ವಹಿಸಿದ ಕಾರ್ಯಗಳನ್ನು ಕಾರ್ಯಗತ ಗೊಳಿಸಲು ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಪ್ರಸ್ತಾಪಿಸಿರುವ ಟಿಪ್ಪಣಿಯನ್ನು ಮಾನ್ಯ ಮುಖ್ಯಮಂತ್ರಿಗಳು ಮೇಲೆ (2)ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಅನುಮೋದಿಸಿದ್ದಾರೆ.

ಆದ್ದರಿಂದ ಸಮಿತಿಯನ್ನು ರಚಿಸಲು ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 66 ಸಂವ್ಯವಿ 2005, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2005**

ರಾಜ್ಯ ವಿಧಾನ ಸಭೆ/ವಿಧಾನ ಪರಿಷತ್ ಅಧಿವೇಶನವನ್ನು ಉತ್ತರ ಕರ್ನಾಟಕದ ಭಾಗದಲ್ಲಿ ನಡೆಸಲು, ಸಮೀಕ್ಷೆ ಮತ್ತು ವರದಿ ನೀಡಲು ಸರ್ಕಾರವು ಈ ಕೆಳಕಂಡಂತೆ ಸಮಿತಿಯನ್ನು ರಚಿಸಿದೆ.

| | | |
|---|---|---|
| 1. ಕಾರ್ಯದರ್ಶಿ,<br>ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ | --- | ಅಧ್ಯಕ್ಷರು |
| 2. ನಿರ್ದೇಶಕರು,<br>ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ | | ಸದಸ್ಯರು |
| 3. ಹೆಚ್ಚುವರಿ ಕಾರ್ಯದರ್ಶಿ,<br>ಕರ್ನಾಟಕ ವಿಧಾನ ಸಭೆ ಸಚಿವಾಲಯ. | --- | ಸದಸ್ಯರು |
| 4. ಜಂಟಿ ಕಾರ್ಯದರ್ಶಿ,<br>ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ. | --- | ಸದಸ್ಯರು |

ಸಮಿತಿಗೆ ಈ ಕೆಳಗೆ ನಮೂದಿಸಿರುವ ಕಾರ್ಯಗಳನ್ನು ವಹಿಸಲಾಗಿದೆ:-

(1) ಬೆಳಗಾವಿ ಮತ್ತು ಗುಲ್ಬರ್ಗ'ಗಳಿಗೆ ಸಮಿತಿ ಭೇಟಿ ಕೊಟ್ಟು ಅ ಭಾಗದ ಪ್ರತಿನಿಧಿಗಳು, ಸಂಘ ಸಂಸ್ಥೆಗಳು, ಸಾರ್ವಜನಿಕರು ಹಾಗೂ ಅಧಿಕಾರಿಗಳೊಂದಿಗೆ ಸಮಾಲೋಚಿಸಿ ಸಮೀಕ್ಷೆ ನಡೆಸುವುದು;

(2) ಈ ಸ್ಥಳಗಳಲ್ಲಿ ಅಧಿವೇಶನಗಳನ್ನು ನಡೆಸಲು ಇರುವ ಸ್ಥಳಾವಕಾಶ ಸದಸ್ಯರಿಗೆ/ ಅಧಿಕಾರಿಗಳಿಗೆ ಅಧಿವೇಶನ ಸಮಯದಲ್ಲಿ ತಂಗುವ ವ್ಯವಸ್ಥೆ ಹಾಗೂ ಮೂಲಭೂತ ಸೌಕರ್ಯಗಳ ಬಗ್ಗೆ ಸ್ಥಳಾವಲೋಕನ ಮತ್ತು ಸಮಾಲೋಚನೆ ನಡೆಸುವುದು;

(3) ಅಧಿವೇಶನ ನಡೆಸಲು ಅವಶ್ಯವಿರುವ ಮೂಲ ಭೂತ ಸೌಲಭ್ಯ/ಸೌಕರ್ಯಗಳ ಸಾಧ್ಯತೆಗಳ ಬಗ್ಗೆ ಸಮಾಲೋಚಿಸಿ ವರದಿ ಮಾಡುವುದು ಹಾಗೂ ಕಾರ್ಯ ಯೋಜನೆಯನ್ನು ಸೂಚಿಸುವುದು;

(4) ಸೌಕರ್ಯಗಳು ಲಭ್ಯವಿಲ್ಲದ ಸಂದರ್ಭಗಳಲ್ಲಿ ಅವುಗಳನ್ನು ಒದಗಿಸುವ ಬಗ್ಗೆ ಸರ್ಕಾರಕ್ಕೆ ಸಲಹೆ ಸೂಚನೆಗಳನ್ನು ನೀಡುವುದು;

ಸಮಿತಿ ದಿನಾಂಕ:14.1.2006ರೊಳಗೆ ಸಮೀಕ್ಷೆ, ಅಧ್ಯಯನ ಕೈಗೊಂಡು ಸರ್ಕಾರಕ್ಕೆ ವರದಿ ಸಲ್ಲಿಸುವುದು;

ಸಮಿತಿಯು ವಿಧಾನ ಸಭೆಯ ಸಚಿವಾಲಯದಿಂದ ಒಬ್ಬರು ವರದಿಗಾರರು/ಶೀಘ್ರಲಿಪಿಗಾರರನ್ನು ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಿಚಾರ್ಡ್ ಲೋಬೊ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ವಿಷಯ:** ಉತ್ತರ ಕರ್ನಾಟಕದ ಪ್ರದೇಶದಲ್ಲಿ ವಿಧಾನ ಸಭೆ/ವಿಧಾನ ಪರಿಷತ್ ಅಧಿವೇಶನ ನಡೆಸುವ ಕುರಿತು.
**ಓದಲಾಗಿದೆ:** ಇದೇ ಕ್ರಮಾಂಕದ ಆದೇಶ ದಿನಾಂಕ:21.11.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಆದೇಶದಲ್ಲಿ ಸಮಿತಿಯನ್ನು ರಚಿಸಿ ಆದೇಶವನ್ನು ಹೊರಡಿಸಲಾಗಿತ್ತು. ಆದರೆ ಸದರಿ ಆದೇಶದಲ್ಲಿ ಪ್ರಸ್ತಾವನೆಯನ್ನು ಸವಿಸ್ತಾರವಾಗಿ ನಮೂದಿಸಿಲ್ಲದಿರುವ ಕಾರಣ ಆದೇಶವನ್ನು ರದ್ದು ಪಡಿಸಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 66 ಸಂವ್ಯವಿ 2005, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2005**

ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 66 ಸಂವ್ಯವಿ 2005, ದಿನಾಂಕ:21.11.2005ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಿಚಾರ್ಡ್ ಲೋಬೊ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 41

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಪಿ.ರಾಜಣ್ಣ, ಸಿಪಿಐ., ಶ್ರೀನಿವಾಸಪುರ ವೃತ್ತ, ಕೋಲಾರ ಜಿಲ್ಲೆ, ಈ ಹಿಂದೆ ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ:135/ಡಿಇ ಆರ್-6/2001. ದಿನಾಂಕ:23-08-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು (ನಗರ) ಇವರ ಆದೇಶ ಸಂಖ್ಯೆ: 17/ಅಪೀಲು/2004 ದಿನಾಂಕ:21-02-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-05-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/22/2005-06 ದಿನಾಂಕ:15-09-2005.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ.ರಾಜಣ್ಣ, ಸಿಪಿಐ, ಶ್ರೀನಿವಾಸಪುರ ವೃತ್ತ ಕೋಲಾರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀಮತಿ ಕವಿತಾರೆಡ್ಡಿ, ಮಾಜಿ ನಗರ ಸಭಾ ಸದಸ್ಯರು, ದಿನಾಂಕ:11-04-2001 ರಂದು ಬೆಳಗಿನ ಜಾವ R.T. ನಗರ ಪೊಲೀಸ್ ಠಾಣೆಗೆ ನೀಡಿದ ದೂರಿನಲ್ಲಿ, ಅವರು ದಿನಾಂಕ:10-04-2001ರಂದು ಮಧ್ಯಾಹ್ನ ಸುಮಾರು 3-30ರ ಸಮಯದಲ್ಲಿ ತಮ್ಮ car ಸಂಖ್ಯೆ:ಕೆಎ-03 ಎನ್-5804 ನಲ್ಲಿ ಮೇಖ್ರಿ ಸರ್ಕಲ್ ಬಳಿ ನಿಧಾನವಾಗಿ ಓಡಿಸಿಕೊಂಡು ಹೋಗುತ್ತಿರಬೇಕಾದರೆ, ಇಬ್ಬರು ಅಪರಿಚಿತ ಯುವಕರು ಬಂದು, ಯಾವುದೋ ಒಂದು ಪುಡಿಯನ್ನು ಕಾರಿನಲ್ಲಿ ಎರಚಿ ಓಡಿ ಹೋಗಿದ್ದು, ನಂತರ ಅವರಿಗೆ ಪ್ರಜ್ಞೆ ತಪ್ಪಿ ಹೋಗಿದ್ದು, ರಾತ್ರಿ ಸುಮಾರು 9-30ರಲ್ಲಿ ಪ್ರಜ್ಞೆ ಬಂದಾಗ, ಮೈಸೂರು ರಸ್ತೆಯ R.V. Collage ಬಳಿ ಇದ್ದು, ಜಕ್ಕೂರಿನ ಎಂ.ರಾಜಣ್ಣ ಎಂಬುವರು ಅವರ ಕ್ಯಾಮರಾದಿಂದ ಫೋಟೋ ತೆಗೆಯುತ್ತಿರುವುದನ್ನು ಕಂಡು, ನೋಡಿಕೊಳ್ಳಲಾಗಿ ಆಕೆಯ ಮೈಮೇಲೆ ಬಟ್ಟೆ ಇರಲಿಲ್ಲವೆಂದು, ಬಳಿಕ ಕಾರಿನಿಂದ ದುಮುಕಿ ಸಮೀಪದ ಪೆಟ್ರೋಲ್ ಬಂಕ್ ಮಾಲೀಕರ ಸಹಾಯದಿಂದ ಮನೆಗೆ ಬಂದು ದಿನಾಂಕ:11-04-2001ರಂದು ಸದರಿ ಘಟನೆಯ ಕುರಿತು ಜಕ್ಕೂರಿನ ಎಂ.ರಾಜಣ್ಣರವರ ವಿರುದ್ಧ ಸೂಕ್ತ ಕಾನೂನಿನ ಕ್ರಮ ಕೈಗೊಳ್ಳಲು ಕೋರಿದ್ದರು. ಆದರೆ, ಠಾಣಾಧಿಕಾರಿಯಾದ ಶ್ರೀ ಹೆಚ್.ಪಿ.ರಾಜಣ್ಣ ಪಿಐ ಆದ ನೀವು ಆ ದಿನ ಬೆಳಿಗ್ಗೆ ಠಾಣೆಗೆ ಬಂದ ಕೂಡಲೇ ಪ್ರಕರಣದ ಮಾಹಿತಿ ಪಡೆದಿದ್ದರೂ, ಓರ್ವ ಹೆಣ್ಣಿನ ಅಸಹಾಯಕ ಸ್ಥಿತಿ ಮತ್ತು ದೌರ್ಜನ್ಯದ ಗಂಭೀರತೆಯನ್ನು ಒಂದು ಸಾಧಾರಣ ಪ್ರಕರಣವೆಂದು ಪರಿಗಣಿಸಿ, ಕೂಡಲೇ ಕ್ರಮ ಕೈಗೊಳ್ಳದೆ, ಅತ್ಯಂತ ಉದಾಸೀನತೆ ಕೋರಿ, ತೀವ್ರವಾದ ಕರ್ತವ್ಯ ನಿರ್ಲಕ್ಷತೆ ಪ್ರದರ್ಶಿಸಿರುತ್ತೀರಿ. ಶಿಸ್ತಿನ ಇಲಾಖೆಯಲ್ಲಿರುವ ನೀವು ಕಾನೂನಿನ ಚೌಕಟ್ಟಿನಲ್ಲಿ ಕೂಡಲೇ ಕ್ರಮ ಕೈಗೊಳ್ಳದೇ, ಉದಾಸೀನತೆ ಕೋರಿ, ಇಲಾಖೆಗೆ ಕಳಂಕ ತಂದಿರುವುದು ಮೇಲ್ನೋಟಕ್ಕೆ ಗೋಚರವಾಗಿರುತ್ತದೆ. ಇದು ನಿಮ್ಮ ಕರ್ತವ್ಯದಲ್ಲಿನ ನಿರ್ಲಕ್ಷತೆ ಹಾಗೂ ದುರ್ನಡತೆ ಎತ್ತಿ ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:23-08-2003ರ ಆದೇಶದಲ್ಲಿ ಅರ್ಜಿದಾರರಿಗೆ ಪಿಐ ಹುದ್ದೆಯ ವೇತನದ ಕನಿಷ್ಟ ಮಟ್ಟಕ್ಕೆ 2 ವರ್ಷಗಳ ಕಾಲ ಇಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರಿಗೆ ವಿಧಿಸಿರುವ ಶಿಕ್ಷೆ ಸ್ವಲ್ಪ ಹೆಚ್ಚಾಗಿದೆ ಎಂದು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:21-02-2005 ರ

ಆದೇಶದಲ್ಲಿ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ಮಾರ್ಪಡಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಕಾಲ ತಡೆಹಿಡಿಯುವ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡು ಬರುತ್ತದೆ. ಯಾರೆ ದೂರು ನೀಡಿದರೂ, ದಾಖಲಿಸಿಕೊಳ್ಳಬೇಕಾಗಿದ್ದು, ಇವರು ದೂರು ನೀಡಿದರೂ ದಾಖಲಿಸಿ ಕೊಳ್ಳದಿರುವುದರಿಂದ, ಇವರ ವಿರುದ್ದ ಗೃಹ ಮಂತ್ರಿಯವರೆಗೂ ದೂರು ನೀಡಿರುವುದು ಕಂಡುಬರುತ್ತಿದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 185 ಪೊಸಿಅ 2005, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಪಿ. ರಾಜಣ್ಣ, ಸಿಪಿಐ ಶ್ರೀನಿವಾಸಪುರ ವೃತ್ತ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:09-05-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 11 **ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ರಾಜಶೇಖರ್, ಪಿಸಿ 437 ಮತ್ತು ಶ್ರೀ ವಿರೂಪಾಕ್ಷ, ಪಿಸಿ 807, ತುಮಕೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ: ಪನ್ಸಿ/ಡಿಇ/ 27/98/ ಓಬಿ ಸಂಖ್ಯೆ:268/2000. ದಿನಾಂಕ:19-12-2000.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/86/2000-01ಓಬಿ ಸಂಖ್ಯೆ:135/2001-02, ದಿನಾಂಕ:13-09-2001.
3) ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-01-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/1/67/2001-02, ದಿನಾಂಕ:18-04-2002.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/72/CNS/05 ದಿನಾಂಕ:26-10-2005.

**ಪ್ರಸ್ತಾವನೆ:**

ಶ್ರೀ ರಾಜಶೇಖರ್ ಪಿಸಿ 437 ಮತ್ತು ಶ್ರೀ ವಿರೂಪಾಕ್ಷ ಪಿಸಿ 817 ತುಮಕೂರು ಇವರುಗಳ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1) ದಿನಾಂಕ:02-02-99ರಂದು ರಾತ್ರಿ ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಶ್ರೀ ರಾಜ್ ಟಾಕೀಸ್ ಮುಂಬಾಗ ಕೆ.ಎ.13-ಎಫ್, 512 ಕೆಎಸ್‌ಆರ್‌ಟಿಸಿ ಬಸ್ಸು ಮತ್ತು ಟಿಎನ್-22, ಬಿ-9222 ಲಾರಿಯ ಮದ್ಯ ಸ್ವಲ್ಪ ತಿಕ್ಕಾಟವಾಗಿದ್ದು, ಅವರುಗಳು ರಾಜಿ ಮಾಡಿಕೊಂಡು ಹೋಗುತ್ತಿರುವಾಗ್ಗೆ ಆ ವೇಳೆಯಲ್ಲಿ ನೀವುಗಳು ರಾತ್ರಿ ಗಸ್ತು ಮುಗಿಸಿಕೊಂಡು ಅಲ್ಲಿಗೆ ಬಂದು ಟಿಎನ್ 22, ಬಿ-9222ರ ಲಾರಿ ಚಾಲಕ ಪಿರ್ಯಾನಾಯ್ಕನನ್ನು ಕುರಿತಂತೆ ಅಪಘಾತ ಮಾಡಿ ತಪ್ಪಿಸಿಕೊಂಡು ಹೋಗುತ್ತಿದ್ದೀಯಾ ಎಂದು ತಿಳಿಸಿ ಲಾರಿಯ ದಾಖಲಾತಿಗಳನ್ನು ಪಡೆದುಕೊಂಡು ಅವುಗಳನ್ನು ಹಿಂದಿರುಗಿಸಲು ರೂ.500,00 ಲಂಚ ಕೊಡಲು ಒತ್ತಾಯಿಸಿ ಕರ್ತವ್ಯದಲ್ಲಿ ಅತೀವ ದುರ್ನಡತೆ ತೋರಿರುವುದು.

2) ಈ ಘಟನೆಯ ಬಗ್ಗೆ ಮೇಲಾಧಿಕಾರಿಗಳಿಗೆ ತಿಳಿಸದೇ ಬೀಟ್ ಪುಸ್ತಕದಲ್ಲಿ ವಿಶೇಷವೇನಿಲ್ಲ ಎಂದು ಬರೆದು ಪ್ರಕರಣವನ್ನು ಮರೆ ಮಾಚಿ ಕರ್ತವ್ಯದಲ್ಲಿ ದುರ್ನಡತೆ ತೋರಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಭಾಗಶ: ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:19-12-2000ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:13-09-2001 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ

ವಿರುದ್ಧದ ಆರೋಪಗಳು ಭಾಗಶ: ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ತಿಳಿಸಿರುವ ಹಿನ್ನೆಲೆಯಲ್ಲಿ, ಅವರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಪುರಸ್ಕರಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಮುಂಬಡ್ತಿಯನ್ನು `ಸಂಚಿತ ಪರಿಣಾಮ ಸಹಿತವಾಗಿ` ಎಂಬುದರ ಬದಲಾಗಿ `ಸಂಚಿತ ಪರಿಣಾಮ ರಹಿತ` ವಾಗಿ ಎರಡು ವರ್ಷಗಳ ಅವಧಿಗೆ ಮುಂದೂಡೂವ ಶಿಕ್ಷೆ ವಿಧಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:26-10-2005ರ ತನ್ನ ಪತ್ರದಲ್ಲಿ ಅರ್ಜಿದಾರರರಿಬ್ಬರೂ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಇವರು ಎಸಗಿರುವ ಕೃತ್ಯವು `ಹೆದ್ದಾರಿ ಡಕಾಯಿತಿಗೆ` ಸಮನಾಗಿದ್ದು, ಇಂತಹ ಕೃತ್ಯವೆಸಗಿ, ತೀವ್ರ ದುರ್ನಡತೆ ಎಸಗಿರುವ ಇವರುಗಳು ಯಾವುದೇ ರೀತಿಯ ಕ್ಷಮೆಗೆ ಅನರ್ಹರೆಂದು ಪರಿಗಣಿಸಿದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 166 ಪೊಸಿಅ 2005, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಶೇಖರ ಪಿಸಿ 437 ಮತ್ತು ಶ್ರೀ ವಿರೂಪಾಕ್ಷ ಪಿಸಿ 817 ತುಮಕೂರು ಇವರು ಸರ್ಕಾರಕ್ಕೆ ಜಂಟಿಯಾಗಿ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಸರ್ಕಾರವು ತಿರಸ್ಕರಿಸಿದೆ.

ಈ ಆದೇಶಗಳನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:26-10-2005ರ ಪತ್ರದಲ್ಲಿ ನೀಡಿರುವ ಅಭಿಪ್ರಾಯದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 12

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## COMMERCE & INDUSTRIES SECRETARIAT

**Subject:** Restructuring of Karnataka Vidyuth Karkhane Ltd (KAVIKA) Bangalore.

**Read:** 1) Letter No. KAVIKA/MD/2004-05, dated: 22.02.2005 of the Managing Director, Karnataka vidyuth Karkhane Ltd., Bangalore.

2) Letter No. KAVIKA/MD/2005-06, dated: 18.05.2005 of the Managing Director, Karnataka Vidyuth Karkhane Ltd., Bangalore.

**PREAMBLE:**

The Managing Director, KAVIKA in his letter dated: 22.02.2005 cited (1) above, sought approval of the Government to dispose approximately 8 acre 38 guntas land belonging to the KAVIKA ltd to clear the out standing dues of the Bank loans obtained for its operations.

2. When the above issue was under consideration, the Managing Director, Karnataka Vidyuth Karkhane Ltd., Bangalore in his further letter dated: 18.05.2005 cited (2) above, has suggested for merger of Karnataka Vidyuth Karkhane Limited (KAVIKA) with Bangalore Electricity Supply Company (BESCOM).

**GOVERNMENT ORDER No. CI 12 CEL 2005, Bangalore, Dated: 5th December 2005**

3. Government have examined the proposal in detail and after taking all the aspects into consideration pass the following orders;

(1) The current arrangement where the Managing Director, BESCOM is also functioning as Managing Director, KAVIKA, shall continue. The merger decision shall be implemented within one year from the date of issue of this order. The intervening period would be used to streamline the organization and settle the liabilities.

(2) Permission is given to KAVIKA to sell the vacant lands measuring approx 8 acres & 33 guntas as per schedule annexed to the best advantage of the company in a transparent manner with the direction that the sale proceeds should be utilized only for clearing the dues of the company with the Banks currently amounting to approximately Rs.16 crores.

(3) KPTCL & BESCOM shall redeploy the staff of KAVIKA to the maximum extent possible in view of their requirement of staff for maintenance and repair of transformers. The remaining employees who cannot be redeployed or employed usefully by the ESCOMs/KPTCL should be offered VRS. The VRS package should be implemented early to reduce the employee strength of the company.

(4) The available the infrastructure of KAVIKA shall be utilized for servicing the transformers supplied to the ESCOMs and also for manufacturing transformers for BESCOM.

(5) In order to become a cost effective supplier and rehabilitate itself, KAVIKA is allowed to make direct sales to KPTCL/ESCOMs who are hereby exempted from the applicability of the KTTP Act as a special case (on supplies from KAVIKA only) for one year OR atleast till the arrangements as at para-(1) are in force.

(6) At the end of one year, if KAVIKA's staff has been either fully redeployed across the ESCOMs are have resorted to VRS and the sale of such landed assets to settle the dues to the banks as also to liabilities such as suppliers bills etc., have been concluded, the Government will consider other options of putting the remaining assets of KAVIKA to alternate uses and derive maximum value, which may be transferred to the corpus of the proposed Rehabilitation / Renewal Fund for the purpose of rehabilitating such PSUs.

4. This order issues of the Concurrence of the Energy Department vide U.O. Note No. EN 90 EEB 2004, dated: 27.06.2005, Department of Public Enterprises Reforms vide its Endorsement No. DDPER 67 SPU 2005, dated: 01.09.2005 and Finance Department vide U.O. Note No. FD 1588 Exp-1/05, dated: 14.10.2005.

By Order and in the name of the Governor of Karnataka,

**K.L. JAYARAM**

Deputy Secretary to Government, Commerce & Industries Department.

**SCHEDULE TO THE GOVERNMENT ORDER NO. CI 12 CEL 2005, DATED: 05.12.2005**

| | ACRE | GUNTAS |
|---|---|---|
| Survey No. 5 of Byatarayanapura, Mysore Road, Bangalore-26 | 4 | 38 |
| Survey No. 8 of Byatarayanapura, Mysore Road, Bangalore-26 | | |
| - Scooter shed | 0 | 20 |
| - KAVIKA Quarters | 2 | 00 |
| Survey No. 9 of Byatarayanapura, Mysore Road, Bangalore-26 | | |
| - Play Ground | 1 | 00 |
| Survey No. 10 of Byatarayanapura, Mysore Road, Bangalore-26 | | |
| - Canara Bank | 0 | 15 |

By Order and in the name of the Governor of Karnataka,

**K.L. JAYARAM**

P.R. 10 Deputy Secretary to Government, Commerce & Industries Department.

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ಸುವರ್ಣ ಕರ್ನಾಟಕದ ಆಚರಣೆಯ ಅಂಗವಾಗಿ ಕರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರುಗಳ ಬಗ್ಗೆ ಸಾಕ್ಷ್ಯಚಿತ್ರಗಳನ್ನು ನಿರ್ಮಿಸಲು ಹಾಗೂ ಟಿ.ವಿ.ಫಿಲ್ಲರ್ಸ್‌ಗಳ ನಿರ್ಮಾಣ ಮತ್ತು ಡಿ.ವಿ.ಡಿ. ಪ್ರತಿ ಮಾಡಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 21.07.2005ರಂದು ಮಾನ್ಯ ಕಂದಾಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಚಿವ ಸಂಪುಟ ಉಪಸಮಿತಿ ಸಭೆಯ ನಡವಳಿ.
2) ದಿನಾಂಕ: 6.12.2005ರಂದು ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.
3) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಅ.ಸ.ಪ.ಸಂ: ಕಸನಿ/10/ಸು.ಕ/2005–06, ದಿನಾಂಕ: 14.12.2005.
4) ಆಯುಕ್ತರು, ವಾರ್ತಾ ಇಲಾಖೆ, ಇವರ ಪತ್ರ ಸಂಖ್ಯೆ: ವಾಇ/ಛಾಚಿವಿ/2005–06/18472, ದಿನಾಂಕ: 19.12.2005.
5) ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ವಾಪ್ರಯು/18/ಪಿಐಎಫ್/2005, ದಿನಾಂಕ: 24.12.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರಲ್ಲಿನ ಸಭೆಗಳಲ್ಲಿ ಕೈಗೊಂಡ ನಿರ್ಣಯದಂತೆ ಮೇಲೆ ಓದಲಾದ ಉಲ್ಲೇಖ (3)ರ ಅರೆ ಸರ್ಕಾರೀ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಪ್ರಸ್ತಾವನೆಯನ್ನು ಸಲ್ಲಿಸಿ, ಅದರಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರುಗಳ ಮತ್ತು ಪ್ರಮುಖ ಘಟನಾವಳಿಗಳ ಸಾಕ್ಷ್ಯಚಿತ್ರ ನಿರ್ಮಾಣ ಮಾಡಲು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ 2005–06ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಕ್ರ.ಸಂ. (19)ರ ಸುವರ್ಣ ಕರ್ನಾಟಕ ಆಚರಣೆ ಜಯಂತಿ ಲೆಕ್ಕಶೀರ್ಷಿಕೆ 2205–00–102–4–09–059 (ಯೋಜನೆ)ಯಡಿ ಹಂಚಿಕೆ ಮಾಡಿಕೊಂಡಿರುವ ಮೊತ್ತದಲ್ಲಿ ಹಣ ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಆಯುಕ್ತರು, ವಾರ್ತಾ ಇಲಾಖೆ, ಇವರು ಪ್ರಧಾನ ಕಾರ್ಯದರ್ಶಿಗಳು, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ, ಇವರಿಗೆ ಬರೆದ ಪತ್ರದಲ್ಲಿ ಕರ್ನಾಟಕ ದರ್ಶನ, ಕರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರುಗಳ ಬಗ್ಗೆ ಪ್ರಸ್ತಾವನೆಯನ್ನು ಕಳುಹಿಸಿ,

1. ಕರ್ನಾಟಕ ಐತಿಹಾಸಿಕ ಸ್ಮಾರಕಗಳು ಹಾಗೂ ಪ್ರಾಕೃತಿಕ ಸಂಪತ್ತು ಕುರಿತಂತೆ;
2. ಕರ್ನಾಟಕ ಸಾಹಿತಿಗಳು, ವಿಜ್ಞಾನಿಗಳು, ರಾಷ್ಟ್ರೀಯ ಮುತ್ಸದಿಗಳ ಕುರಿತಂತೆ ಹಾಗೂ;
3. ರಾಷ್ಟ್ರದ ಸ್ವಾತಂತ್ರ್ಯ ಕುರಿತು ಹೋರಾಡಿದ ಮಹನೀಯರುಗಳ ಕುರಿತಂತೆ

ಮೂರು ಸಾಕ್ಷ್ಯಚಿತ್ರಗಳನ್ನು, 30–60 ಸೆಕೆಂಡ್ ಅವಧಿಯ 3 ವಿವಿಧ ಟಿ.ವಿ. ಸ್ಪಾಟ್‌ಗಳನ್ನು ನಿರ್ಮಿಸಿ ಸಾಕ್ಷ್ಯಚಿತ್ರಗಳ ಪ್ರಸಾರ ಸಂದರ್ಭದಲ್ಲಿ ದೂರದರ್ಶನ–1 ಮತ್ತು ಚಂದನ ಚಾನಲ್‌ಗಳಲ್ಲಿ ಪ್ರಸಾರ ಮಾಡಲಾಗುತ್ತಿದ್ದು, ಸಾಕ್ಷ್ಯಚಿತ್ರಗಳ ನಿರ್ಮಾಣ, ಟಿ.ವಿ.ಫಿಲ್ಲರ್ಸ್‌ಗಳ ನಿರ್ಮಾಣ ಮತ್ತು ಡಿ.ವಿ.ಡಿ. ಪ್ರತಿ ಮಾಡಿ ಪ್ರಸಾರ ಮಾಡಲು ಈ ಕೆಳಗಿನಂತೆ ಅಂದಾಜು ವೆಚ್ಚವನ್ನು ತಯಾರಿಸಿರುತ್ತಾರೆ.

| | | |
|---|---|---|
| 1 | ಒಂದು ಸಾಕ್ಷ್ಯಚಿತ್ರ ನಿರ್ಮಾಣಕ್ಕೆ ರೂ. 5.00 ಲಕ್ಷದಂತೆ ಮೂರು ಸಾಕ್ಷ್ಯಚಿತ್ರಗಳ ನಿರ್ಮಾಣ ವೆಚ್ಚ | ರೂ. 15,00,000–00 |
| 2 | ಮೂರು ಸಾಕ್ಷ್ಯಚಿತ್ರಗಳನ್ನು ತಿಂಗಳಿಗೆ ಒಂದು ಸಾರಿಯಂತೆ ವರ್ಷದಲ್ಲಿ 12 ಸಾರಿ ಡಿ.ಡಿ.–1 ಮತ್ತು ಚಂದನ ಚಾನಲ್‌ಗಳಲ್ಲಿ ಪ್ರಸಾರ ಮಾಡಲು ಆಗುವ ಪ್ರಸಾರ ಶುಲ್ಕ (ಒಂದು ಸಾರಿ ಪ್ರಸಾರಕ್ಕೆ ರೂ. 25,000/– ದಂತೆ) | ರೂ. 3,00,000–00 |
| 3 | 3 ಸಾಕ್ಷ್ಯಚಿತ್ರಗಳ ತಲಾ 30 ಡಿ.ವಿ.ಡಿ. ಪ್ರತಿ ಮಾಡಿಸುವ ವೆಚ್ಚ (ಒಂದು ಡಿ.ವಿ.ಡಿ. ಪ್ರತಿಗೆ ರೂ. 400/– ರಂತೆ) ಒಟ್ಟು 90 ಡಿ.ವಿ.ಡಿ. ಪ್ರತಿಗಳಿಗೆ (400 x 90) | ರೂ. 36,000–00 |
| 4 | 3 ಟಿ.ವಿ. ಫಿಲ್ಲರ್‌ಗಳ ನಿರ್ಮಾಣ ವೆಚ್ಚ (ಒಂದು ಟಿ.ವಿ. ಫಿಲ್ಲರ್‌ಗೆ ರೂ. 40,000/– ದಂತೆ) | ರೂ. 1,20,000–00 |
| | **(ಹತ್ತೊಂಬತ್ತು ಲಕ್ಷದ ಎಂಬತ್ತಾರು ಸಾವಿರ ರೂಪಾಯಿಗಳು ಮಾತ್ರ)** | **ರೂ. 19,86,000–00** |

ಮೇಲೆ ಓದಲಾದ ಉಲ್ಲೇಖ (5)ರ ಅನಧಿಕೃತ ಟಿಪ್ಪಣಿಯಲ್ಲಿ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಆಯುಕ್ತರ ಕೋರಿಕೆಯಂತೆ ಕರ್ನಾಟಕ ಏಕೀಕರಣ ಕುರಿತ 3 ಸಾಕ್ಷ್ಯಚಿತ್ರಗಳನ್ನು ಹಾಗೂ ಟಿ.ವಿ.ಫಿಲ್ಲರ್ಸ್‌ಗಳ ನಿರ್ಮಾಣ ಮತ್ತು ಡಿ.ವಿ.ಡಿ. ಪ್ರತಿ ಮಾಡಿಸಲು ತಗಲುವ ಅಂದಾಜು ವೆಚ್ಚ ರೂ. 19.86 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಇಲಾಖೆಯನ್ನು ಕೋರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 54 ಕರಅ 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಆಚರಣೆಯ ಸಂದರ್ಭದಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರುಗಳ ಮತ್ತು ಪ್ರಮುಖ ಘಟನಾವಳಿಗಳ ಸಾಕ್ಷ್ಯಚಿತ್ರ ನಿರ್ಮಾಣ ಹಾಗೂ ಟಿ.ವಿ.ಫಿಲ್ಲರ್ಸ್‌ಗಳ ನಿರ್ಮಾಣ ಮತ್ತು ಡಿ.ವಿ.ಡಿ. ಪ್ರತಿ ಮಾಡಿಸಲು ರೂ. 19.86 ಲಕ್ಷ (ರೂಪಾಯಿ ಹತ್ತೊಂಬತ್ತು ಲಕ್ಷ ಎಂಬತ್ತಾರು ಸಾವಿರಗಳು ಮಾತ್ರ)ಗಳನ್ನು ಆಯುಕ್ತರು, ವಾರ್ತಾ ಇಲಾಖೆ, ಇವರಿಗೆ ಪಾವತಿ ಮಾಡಲು ಬಿಡುಗಡೆ ಮಾಡಲಾಗಿದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಈ ಮೊತ್ತವನ್ನು ಸುವರ್ಣ ಕರ್ನಾಟಕ ಜಯಂತಿ ಆಚರಣೆ ಲೆಕ್ಕಶೀರ್ಷಿಕೆ 2205–00–102–4–09–059 (ಯೋಜನೆ)ಯಡಿ ಡ್ರಾ ಮಾಡಿ ಕೂಡಲೇ ಆಯುಕ್ತರು, ವಾರ್ತಾ ಇಲಾಖೆ, ಇವರಿಗೆ ಚೆಕ್/ಡಿ.ಡಿ. ಮೂಲಕ ವಿತರಿಸಲು ಸೂಚಿಸಿದೆ. ಈ ಆದೇಶವು ಈ ಕೆಳಕಂಡ ಷರತ್ತಿಗೆ ಒಳಪಟ್ಟಿರುತ್ತದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.
2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಪಿ.ಆರ್. 68 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಸುವರ್ಣ ಕರ್ನಾಟಕ ಜಯಂತಿ ಅಂಗವಾಗಿ ಕನ್ನಡದ 100 ಶ್ರೇಷ್ಠ ಕೃತಿಗಳನ್ನು ಪ್ರಕಟಿಸುವ ಬಗ್ಗೆ.

**ಓದಲಾಗಿದೆ:** 1) ಕ.ಸಂ.ನಿ.ಸುವರ್ಣ ಕರ್ನಾಟಕ ಕೃತಿ ಪ್ರಕಟಣೆ: 2004–05, ದಿನಾಂಕ: 9–08–2005.

2) ಕ.ಸಂ.ನಿ:2:ಸುವರ್ಣ ಕರ್ನಾಟಕ:2004–05, ದಿನಾಂಕ: 14–05–2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಸುವರ್ಣ ಕರ್ನಾಟಕ ಸ್ವರ್ಣ ಜಯಂತಿ ಅಂಗವಾಗಿ ಕನ್ನಡದ 100 ಶ್ರೇಷ್ಠ ಕೃತಿಗಳನ್ನು ಬರೆಯಿಸಿ, ಸಂಗ್ರಹಿಸಿ ಮರು ಮುದ್ರಿಸಲು ದಿನಾಂಕ: 10–12–2004ರಂದು ಹಾಗೂ ದಿನಾಂಕ: 21–07–2005ರಂದು ನಡೆದ ಸಚಿವ ಸಂಪುಟದ ಉಪ ಸಮಿತಿಯು ನಿರ್ಣಯಿಸಿರುತ್ತದೆಂದು ತಿಳಿಸಿ ಈ 100 ಶ್ರೇಷ್ಠ ಕೃತಿಗಳಲ್ಲಿ 50 ಕನ್ನಡ ಸಾಹಿತ್ಯ ಶ್ರೇಷ್ಠ ಸೃಜನ ಪ್ರಕಾರದಲ್ಲಿ ಕೃತಿಗಳ ಉಳಿದ 50 ಪ್ರತಿಗಳ ಸೃಜನೇತರ ಪ್ರಕಾರದಿಂದಲೂ ಆಚರಿಸಬೇಕೆಂದು ತಿಳಿಸಿ ಈ 100 ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಕ್ರಮ ಸಂಖ್ಯೆ 2ರಲ್ಲಿ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ಕೆಲವೊಂದು ಅಂಶಗಳ ಮೇಲೆ ಹೆಚ್ಚುವರಿ ಮಾಹಿತಿಯನ್ನು ಒದಗಿಸುತ್ತಾ ಸವಿಸ್ತಾರವಾದ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಕಳಿಸಿರುತ್ತಾರೆ.

ತಮ್ಮ ಪ್ರಸ್ತಾವನೆಯಲ್ಲಿ ಸರ್ಕಾರವು ನಿರ್ಣಯಿಸಿದಂತೆ 100 ಶ್ರೇಷ್ಠ ಕೃತಿಗಳನ್ನು ಸಾಹಿತಿಗಳು/ವಿದ್ವಾಂಸರು/ಅಕಾಡೆಮಿ ಅಧ್ಯಕ್ಷರು/ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು/ನಾಟಕ ಅಕಾಡೆಮಿ ಅಧ್ಯಕ್ಷರುಗಳನ್ನು ಒಳಗೊಂಡಂತೆ ಪರಿಣಿತರ ಆಯ್ಕೆ ಸಮಿತಿಯಿಂದ ಆಯ್ಕೆ ಮಾಡಲಾಗಿದೆಯೆಂದು ತಿಳಿಸಿ ಈ 100 ಶ್ರೇಷ್ಠ ಕೃತಿಗಳನ್ನು ಮುದ್ರಿಸಿ ಪ್ರಕಟಿಸಲು ಪ್ರಸ್ತಾಪಿಸಿರುತ್ತಾರೆ.

ಅಂತೆಯೇ ಈ 100 ಶ್ರೇಷ್ಠ ಕೃತಿಗಳ 1000 ಪ್ರತಿಗಳನ್ನು ಮುದ್ರಿಸಿ ಪ್ರಕಟಿಸಲು ಒದಗುವ ಖರ್ಚಿನ ವಿವರ ಈ ಕೆಳಕಂಡಂತಿದೆ.

| | | |
|---|---|---|
| 1) | 100 ಕೃತಿಗಳ ಲೇಖಕರ/ಸಂಪಾದಕರ ಸಂಭಾವನೆ | ರೂ. 20,00,000–00 |
| 2) | 100 ಕೃತಿಗಳ ಮುದ್ರಣ (1000 ಪ್ರತಿಗಳಿಗೆ) | ರೂ. 34,63,225–00 |
| 3) | ಟೆಂಡರ್ ವೆಚ್ಚ, ರ್‍ಯಾಪಲ್, ಕಲಾವಿನ್ಯಾಸ, ಸಭೆ ಇತರೆ ವೆಚ್ಚ | ರೂ. 4,00,000–00 |
| | **ಒಟ್ಟು ಮೊತ್ತ** | **ರೂ. 58,63,225–00** |

(ರೂಪಾಯಿ ಐವತ್ತೆಂಟು ಲಕ್ಷದ ಅರವತ್ತಮೂರು ಸಾವಿರದ ಎರಡುನೂರ ಇಪ್ಪತ್ತೈದು ಮಾತ್ರ)

ಆಯ್ಕೆಯಾದ 100 ಶ್ರೇಷ್ಠ ಕೃತಿಗಳ 3000 ಪ್ರತಿಗಳನ್ನು ಮುದ್ರಿಸಿ ಪ್ರಕಟಿಸಲು ತಗಲುವ ವೆಚ್ಚದ ವಿವರ ಈ ಕೆಳಕಂಡಂತಿದೆ.

| | |
|---|---|
| 1) 90 ಕೃತಿಗಳ ಲೇಖಕರ/ ಸಂಪಾದಕರ ಸಂಭಾವನೆ (90 ಕೃತಿಗಳಿಗೆ ಮೂಲ ಲೇಖಕರ ಸಂಭಾವನೆ ಕೃತಿಯೊಂದಕ್ಕೆ ರೂ.20,000/-ದಂತೆಯೂ ಸಂಪಾದಿತ ಕೃತಿಯ ನೂರಾರು ಬಿಡಿಲೇಖನಗಳ ಹಾಗೂ ಸಂಪಾದಕರ ಸಂಭಾವನೆ ತಲಾ ಕೃತಿಗೆ ರೂ.1.00 ಲಕ್ಷದಂತೆ 10 ಕೃತಿಗಳಿಗೆ ಹಾಗೂ 10 ಸಂಪಾದಿತ ಕೃತಿಗಳು) | ರೂ. 28,00,000-00 |
| 2) 100 ಕೃತಿಗಳ ಮುದ್ರಣ (3000 ಪ್ರತಿಗಳಿಗೆ) | ರೂ. 1,00,92,250-00 |
| 3) ಟೆಂಡರ್ ವೆಚ್ಚ, ರ್‍ಯಾಪಲ್, ಕಲಾವಿನ್ಯಾಸ, ಸಭೆ ಇತರೆ ವೆಚ್ಚ | ರೂ. 4,02,750-00 |
| **ಒಟ್ಟು ಮೊತ್ತ** | **ರೂ. 1,32,95,000-00** |

(ರೂಪಾಯಿ ಒಂದು ಕೋಟಿ ಮೂವತ್ತೆರಡು ಲಕ್ಷದ ತೊಂಭತ್ತೈದು ಸಾವಿರಗಳು ಮಾತ್ರ)

ಈ ಯೋಜನೆಗೆ ತಗಲುವ ಒಟ್ಟಾರೆ ವೆಚ್ಚ 132.95 ಲಕ್ಷಗಳೆಂದು ಅಂದಾಜಿಸಿ, ಇದರಲ್ಲಿ ಮೊದಲನೆ ಕಂತಾಗಿ ರೂ. 47.00 ಲಕ್ಷಗಳನ್ನು **ಸುವರ್ಣ ಕರ್ನಾಟಕ'** ಕಾರ್ಯಕ್ರಮಗಳ ಅಯೋಜನೆಗೆ ಕ್ರಿಯಾ ಯೋಜನೆಯಲ್ಲಿ ಒದಗಿಸಿದ ಅನುದಾನದ ಲೆಕ್ಕ ಶೀರ್ಷಿಕೆ 2205-00-102-4-09-059 ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 88 ಕರಅ 2005, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಸ್ವರ್ಣ ಜಯಂತಿ ಆಚರಣೆ ಅಂಗವಾಗಿ ಕನ್ನಡದ 100 ಶ್ರೇಷ್ಠ ಕೃತಿಗಳನ್ನು ಆಯ್ಕೆಮಾಡಲು ನೇಮಿಸಿದ ಆಯ್ಕೆಸಮಿತಿಯು ಆಯ್ಕೆ ಮಾಡಿದ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿದ ಒಂದುನೂರು ಕನ್ನಡದ ಶ್ರೇಷ್ಠ ಕೃತಿಗಳನ್ನು ಮುದ್ರಿಸಿ ಪ್ರಕಟಿಸಲು ಸರ್ಕಾರವು ಅನುಮೋದನೆ ನೀಡಿದೆ. ಇದಕ್ಕೆ ತಗಲುವ ವೆಚ್ಚ ರೂ. 47.00 (ನಲವತ್ತೇಳು ಲಕ್ಷ ರೂಪಾಯಿಗಳು ಮಾತ್ರ) ಲಕ್ಷಗಳನ್ನು **ಸುವರ್ಣ ಕರ್ನಾಟಕ'** ಕಾರ್ಯಕ್ರಮಗಳ ಪೂರ್ವಸಿದ್ದತೆಗೆ 2005-06ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿದ ಅನುದಾನದ ಲೆಕ್ಕ ಶೀರ್ಷಿಕೆ 2205-00-102-4-09-059 (ಯೋಜನೆ) ಅಡಿಯ ರೂ.10.00 ಕೋಟಿಗಳಲ್ಲಿ ಈ ಕೆಳಕಂಡ ಷರತ್ತಿಗೊಳಪಟ್ಟು ಭರಿಸಲು ಮಂಜೂರಾತಿ ನೀಡಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.
2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಯೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆ.ಸಂ. ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 88 ಕರಅ 2005, ಬೆಂಗಳೂರು, ದಿನಾಂಕ:28.12.2005ರ**

**ಸೃಜನೇತರ ಸಾಹಿತ್ಯ (ಆಯ್ಕೆಪಟ್ಟಿ)**

1. ನಕ್ಷತ್ರ ಲೋಕ - ಆರ್.ಎಲ್. ನರಸಿಂಹಯ್ಯ
2. ಹಕ್ಕಿಗಳು - ಪ್ರೊ. ಕೆ.ಎಸ್.ನಿಸಾರ್ ಅಹಮದ್
3. ಹಿಂದೂ ದರ್ಶನಸಾರ - ತಿರುವಳ್ಳು ಶ್ರೀನಿವಾಸ ರಾಘವಾಚಾರ್
4. ವಿಚಿತ್ರಲೋಕದಲ್ಲಿ ವಿದ್ಯಾಲಂಕಾರ - ಬಿ.ಬಿ.ಸುಬ್ಬರಾಮಪ್ಪ
5. ದಿಲ್ಲೀಶ್ವರನ ದಿನಚರಿ - ನಾ.ಕಸ್ತೂರಿ
6. ಅಜಂತ ಎಲ್ಲೋರ - ಎಂ.ಎಚ್.ಕೃಷ್ಣ
7. ಭಾಷೆಗೆ ಸಂಬಂಧಿಸಿದಂತೆ ಆಯ್ದ ಲೇಖನಗಳ ಸಂಪಾದನೆ - ಡಿ.ಎನ್.ಶಂಕರಭಟ್ಟ
8. ಕನ್ನಡ ಲಿಪಿಯ ಉಗಮ ಎ.ಟಿ.ನರಸಿಂಹಮೂರ್ತಿ
9. ಕನ್ನಡ ಗ್ರಂಥಸಂಪಾದನೆ - ಪ್ರೊ.ಡಿ.ಎಲ್.ನರಸಿಂಹಚಾರ್
10. ಕಲಾವಿದರು - ವಾಸುದೇವಾಚಾರ್
11. ಬೇಟೆಯ ಅನುಭವಗಳು - ಕಾಕೆಮಾನಿ ಸುಬ್ಬಯ್ಯ
12. ಜೈನಧರ್ಮ - ಮಿರ್ಜಿ ಅಣ್ಣಾರಾಯ
13. ಡಾ: ಚಿ.ಮೂ.ಅವರ ಆಯ್ದಲೇಖನಗಳು - ಡಾ:ಚಿದಾನಂದ ಮೂರ್ತಿ
14. ಡಾ:ಎಂ.ಎಂ.ಕಲಬುರ್ಗಿ ಅವರ ಆಯ್ದ ಲೇಖನಗಳು - ಡಾ: ಎಂ.ಎಂ. ಕಲುಬುರ್ಗಿ
15. ಭಾರತೀಯ ಸಂಸ್ಕೃತಿ - ಎಚ್. ಶ್ರೀಕಂಠಶಾಸ್ತ್ರಿ
16. ಗಾನಕಲೆ - ರಾಳಪಳ್ಳಿ ಕೃಷ್ಣಶರ್ಮ
17. ಭಾಷಣಗಳು -ಲೇಖನಗಳು - ಎ.ಆರ್.ಕೃಷ್ಣಶಾಸ್ತ್ರಿ

18. ಕಾವ್ಯಮೀಮಾಂಸೆಗೆ ಸಂಬಂಧಿಸಿದ ಆಯ್ದ ಲೇಖನಗಳು – ಸಂ. ಡಾ:ಕೆ.ಕೃಷ್ಣಮೂರ್ತಿ
19. ಪುರುಷಸರಸ್ವತಿ – ಜಿ.ಪಿ.ರಾಜರತ್ನಂ
20. ಗೌರೀಶ ಕಾಯ್ಕಿಣಿ ಆಯ್ದ ಲೇಖನಗಳು – ಸಂ. ವಿಷ್ಣುನಾಯಕ
21. ಡಿ.ದೇವರಾಜ ಅರಸು ಅವರ ಲೇಖನಗಳು – ಸಂ.ಶೂದ್ರಶ್ರೀನಿವಾಸ
22. ಹೋರಾಟದ ದಿಟ್ಟ ಹೆಜ್ಜೆಗಳು – ಎಚ್.ಎಸ್.ದೊರೆಸ್ವಾಮಿ
23. ಬದುಕು–ಮೆಲುಕು – ಎಚ್.ಕೆ.ವೀರಣ್ಣಗೌಡ
24. ಮೈಸೂರು ಆಗ ಮತ್ತು ಈಗ – ಮೊಹಮ್ಮದ್ ಜೆ.ಎಂ.ಇಮಾಂ
25. ಮೈಸೂರು ಇತಿಹಾಸದ ಹಳೆಯ ಪುಟಗಳು – ತಿ.ತಾ.ಶರ್ಮ
26. ಟಿಪ್ಪುಸುಲ್ತಾನ್ – ಬಿ.ಶೇಕ್‌ಅಲಿ
27. ವಸಾಹತೀಕರಣ ಕರ್ನಾಟಕ(ಆಯ್ದ ಲೇಖನಗಳು) – ಸಂ. ಡಾ: ಎಸ್. ಚಂದ್ರಶೇಖರ್
28. ಸರ್.ಎಂ.ವಿ. ಯವರ ಇಂಗ್ಲೀಷ್ ಲೇಖನಗಳನ್ನು ಕನ್ನಡಕ್ಕೆ ತರಬೇಕು – ಸಂ.ಅನು:ಪ್ರೊ.ಕೆ.ಎಸ್.ಭಗವಾನ್
29. ಆತ್ಮ ಶೋಧನೆ – ಮಧುರಚೆನ್ನ
30. ಬೇಂದ್ರೆಯವರ ವಿಚಾರ ಲೇಖನಗಳು – ವಾಮನ ಬೇಂದ್ರೆ
31. ನನ್ನ ಸಾರ್ವಜನಿಕ ಜೀವನ – ಮಿರ್ಜಾಇಸ್ಮಾಯಿಲ್
32. ಹಂಪನಾ ಅವರ ಆಯ್ದ ಲೇಖನಗಳು – ಡಾ: ಹಂಪನಾ
33. ನಾಡೋಜ ಪಂಪ – ಮುಳಿಯ ತಿಮ್ಮಪ್ಪಯ್ಯ
34. ವಿಜ್ಞಾನಕ್ಕೆ ಆಯ್ದ ಲೇಖನಗಳು ಸಂಕಲನ – ಸಂ.ನಾಗೇಶ್ ಹೆಗಡೆ
35. ವಚನ ಸಾಹಿತ್ಯ ಸಂಗ್ರಹ – ಭೂಸನೂರ ಮಠ
36. ಶಿ.ಶಿ.ಬಸವನಾಳರ ಆಯ್ದ ಲೇಖನಗಳು – ಸಂ.ಗಿರಡ್ಡಿ ಗೋವಿಂದರಾಜು
37. ಉರಿಯ ನಾಲಿಗೆ – ಡಿ.ಕುರ್ತುಕೋಟಿ
38. ಭಗವಾನ್ ಬುದ್ಧ – ಡಿ.ಡಿ.ಕೋಸಂಬಿ
39. ಗಿರಿಜನ ನಾಡಿಗೆ ಪಯಣ – ಹಿ.ಚಿ.ಬೋರಲಿಂಗಯ್ಯ
40. ಡಿ.ಆರ್.ಆಯ್ದ ಲೇಖನಗಳು – ಅಗ್ರಹಾರ ಕೃಷ್ಣಮೂರ್ತಿ
41. ಆಹಾರ ಪೋಷಣೆಯ ಪರಿಚಯ – ಹೆಚ್.ಟಿ.ಶಿವಲೀಲಾ
42. ಮನೋ ವಿಜ್ಞಾನದ ಲೇಖನಗಳು – ಸಿ.ಆರ್.ಚಂದ್ರಶೇಖರ
43. ಭಾರತೀಯ ವಿಜ್ಞಾನದ ಹಾದಿ – ಡಾ: ಜಿ.ರಾಮಕೃಷ್ಣ
44. ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ – ಸಿ.ಆರ್.ಗೋವಿಂದರಾಜ
45. ಜಿ.ರಾಜಶೇಖರ ಆಯ್ದ ಲೇಖನಗಳು – ಜಿ.ರಾಜಶೇಖರ
46. ಕರ್ನಾಟಕ ಗತವೈಭವ – ಆಲೂರ ವೆಂಕಟರಾಯರು

**ಇಂಗ್ಲೀಷಿನಲ್ಲಿ:**

47. ಕನ್ನಡ ಸಾಹಿತ್ಯ ಪರಿಚಯ – ಸಂ:ರಾಜೇಂದ್ರ ಚೆನ್ನಿ, ಸಂ.ಸಿ.ಎನ್.ರಾಮಚಂದ್ರನ್
48. ಕನ್ನಡ ರಂಗಭೂಮಿ ಜಾನಪದ–ಯಕ್ಷಗಾನ–ಬೀದಿನಾಟಕ ವೃತ್ತಿ ಹಾಗೂ ಹವ್ಯಾಸಿ ಮತ್ತು ಕಾರ್ಮಿಕ ರಂಗಭೂಮಿ ಕುರಿತಂತೆ – ಪ್ರೊ.ಲಿಂಗದೇವರು ಹಳೇಮನೆ
49. ಶಾಸ್ತ್ರಿಯ ನೃತ್ಯ, ಸಂಗೀತ, ಸುಗಮ ಸಂಗೀತ ಕುರಿತ ಸಂಕಲನ – ಸಂ:
50. ಶಿಲ್ಪಕಲೆ, ಚಿತ್ರಕಲೆ, ಛಾಯಾಚಿತ್ರ ಕರಕುಶಲ ಕಲೆ ಕುರಿತ ಸಂಕಲನ – ಸಂ:

## ಸಾಹಿತ್ಯ ಪ್ರಕಾರ

**ಕಾದಂಬರಿ**

**ಅ) ನವೋದಯ**

1) ರಾವ್‌ಬಹದ್ದೂರ್ – ಗ್ರಾಮಾಯಣ

**ಆ) ನವ್ಯ** –

2) ಶಾಂತಿನಾಥ ದೇಸಾಯಿ – ಮುಕ್ತಿ
3) ಶಂಕರ್ ಮೊಕಾಶಿ ಪುಣೇಕರ – ಅವಧೇಶ್ವರಿ
4) ಕುಸುಮಾಕರ ದೇವರಗಣ್ಣೂರ – ನಾಲ್ಕನೆ ಆಯಾಮ
5) ಪೂರ್ಣಚಂದ್ರ ತೇಜಸ್ವಿ – ಚಿದಂಬರ ರಹಸ್ಯ

**ಇ) ಪ್ರಗತಿಶೀಲ:**

6) ಬಸವರಾಜ ಕಟ್ಟಿಮನಿ – ಜ್ವಾಲಾಮುಖಿ ಮೇಲೆ
7) ನಿರಂಜನ – ಚಿರಸ್ಮರಣೆ
8) ಅ.ನ.ಕೃ – ನಟಸಾರ್ವಭೌಮ
9) ಅನುಪಮಾ ನಿರಂಜನ – ಮಾಧವಿ
10) ಚದುರಂಗ – ವೈಶಾಖ
11) ತ್ರಿವೇಣಿ – ದೂರದ ಬೆಟ್ಟ
12) ಎಸ್.ಎಲ್.ಭೈರಪ್ಪ – ಗೃಹಭಂಗ

| | | |
|---|---|---|
| 13) ಯು.ಆರ್.ಅನಂತಮೂರ್ತಿ | – | ಸಂಸ್ಕಾರ |
| 14) ವ್ಯಾಸರಾಯ ಬಲ್ಲಾಳ | – | ಉತ್ತರಾಯಣ |
| 15) ಗೀತಾನಾಗಭೂಷಣ | – | ಅಸರೆಗಳು |
| 16) ನಾ.ಡಿಸೋಜ | – | ತಿರುಗೋಡಿನ ರೈತಮಕ್ಕಳು |
| 17) ಕೆ.ಟಿ.ಗಟ್ಟಿ | – | ಅರಗಿನ ಮನೆ |
| 18) ಕು.ವೀರಭದ್ರಪ್ಪ | – | ಆಸ್ತಿ |
| 19) ಸಂ.ಪಿ.ಕೆ.ರಾಜಶೇಖರ | – | ಮಂಟೇಸ್ವಾಮಿ ಕಾವ್ಯ |
| 20) ಎಂ.ಕೆ. ಇಂದಿರಾ | – | ತುಂಗಭದ್ರ |
| 21) ದೇವನೂರು ಮಹದೇವ | – | ಒಡಲಾಳ |
| 22) ಗಂಗಾಧರೇಶ್ವರ ಮಡಿವಾಳೇಶ್ವರ ತುರುಮರಿ | – | ಕಾದಂಬರಿ |
| 23) ಎಂ.ವಿ.ಇನಾಂದಾರ್ | – | ಚಿತ್ರಲೇಖ |
| 24) ಕುಮಾರ ವೆಂಕಣ್ಣ | – | ಬಣ್ಣದ ಮಹಾಲಿಂಗ |
| 25) ಸಾರ ಅಬೂಬಕರ್ | – | ಚಂದ್ರಗಿರಿಯ ತೀರದಲ್ಲಿ |
| 26) ಯಶವಂತ ಚಿತ್ತಾಲ | – | ಮೂರುದಾರಿ |
| **II ಜೀವನ ಚರಿತ್ರೆ/ಆತ್ಮಚರಿತ್ರೆ** | | |
| 27) ಹಾ.ಮಾ.ನಾಯಕ | | ಕವೀಂದ್ರ ರವೀಂದ್ರರು |
| 28) ಪ್ರಭು ಶಂಕರ | – | ಬೆರಗು |
| 29) ತ.ಸು.ಶಾಮರಾಯ | – | ಮೂರು ತಲೆಮಾರುಗಳು |
| 30) ಜೋಳದ ರಾಶಿ ದೊಡ್ಡನಗೌಡರು | – | ನನ್ನ ನಾ ಓದಿದೆ |
| 31) ಡಾ: ನಾಗಲೋಟಿಮಠ್ | – | ಬಿಚ್ಚಿದ ಜೋಳಿಗೆ |
| 32) ಡಾ: ಹೆಚ್.ನರಸಿಂಹಯ್ಯ | – | ಹೋರಾಟದ ಹಾದಿ |
| 33) ತುಂಬಾಡಿ ರಾಮಯ್ಯ | – | ಮಣೀಗಾರ |
| 34) ಎ.ಕೆ.ರಾಮಾನುಜನ್ | – | ಮತ್ತೊಬ್ಬನ ಆತ್ಮಕಥೆ |
| 35) ಎ.ಎನ್.ಮೂರ್ತಿರಾಯರು | – | ಸಂಜೆಗಣ್ಣಿನ ಹಿನ್ನೋಟ |
| 36) ದೇ.ಜವರೇಗೌಡರು | – | ಗುಡಿಸಲಿನಿಂದ ಗಂಗೋತ್ರಿಗೆ |
| **III ಪ್ರವಾಸ ಕಥನ** | | |
| 37) ಕೃಷ್ಣಾನಂದ ಕಾಮತ್ | – | ವಂಗದರ್ಶನ |
| 38) ಬಿ.ಜಿ.ಎಲ್.ಸ್ವಾಮಿ | – | ನಾನು ಅಮೆರಿಕೆಗೆ ಹೋಗಿದ್ದೆ |
| 39) ಜಿ.ಎಸ್.ಶಿವರುದ್ರಪ್ಪ | – | ಮಾಸ್ಕೊದಲ್ಲಿ 22 ದಿನ |
| **IV ಸಂಕಲನಗಳು** | | |
| **ಪ್ರಕಾರ** | | **ಸಂಪಾದಕರು** |
| 40) ಕಾವ್ಯ ಸಂಕಲನ | – | ಡಾ:ಬಿ.ಎ.ಸನದಿ<br>ಶ್ರೀಮತಿ ಸವಿತ ನಾಗಭೂಷಣ |
| 41) ಸಣ್ಣ ಕಥೆ | – | ಪ್ರೊ. ಕೃಷ್ಣಮೂರ್ತಿ ಹನೂರು<br>ಶ್ರೀಮತಿ ಭಾನು ಮುಸ್ತಾಕ್ |
| 42) ಏಕಾಂಕ ನಾಟಕ | – | ಪ್ರೊ. ಚಂದ್ರಶೇಖರ ಪಾಟೀಲ<br>ಶ್ರೀಮತಿ ಎಸ್.ಮಾಲತಿ |
| 43) ಲಲಿತ ಪ್ರಬಂಧ | – | ಪ್ರೊ.ಶಿವರಾಮ ಕಾಡನಕುಪ್ಪೆ<br>ಶ್ರೀಮತಿ ಕಮಲಾ ಹೆಮ್ಮಿಗೆ |
| 44) ವಿಮರ್ಶ ಲೇಖನ | – | ಶ್ರೀ.ಹೆಚ್. ದಂಡಪ್ಪ<br>ಶ್ರೀಮತಿ ಸುಮಿತ್ರಾಬಾಯಿ |
| 45) ವಿಚಾರ ಸಾಹಿತ್ಯ | – | ಡಾ: ಬಸವರಾಜ ಕಲ್ಗುಡಿ<br>ಶ್ರೀ.ವಿ. ಚಂದ್ರಶೇಖರ ನಂಗಲಿ |
| 46) ಜನಪದ ಲೇಖನ | – | ಪ್ರೊ. ವೀರಣ್ಣ ದಂಡೆ<br>ಶ್ರೀ.ಶ್ರೀ ಪಾದಶೆಟ್ಟಿ |
| 47) ಪೂರ್ಣಾವಧಿ ನಾಟಕ<br>(ಭಾಗ–1,ಭಾಗ–2) | – | ಶ್ರೀ.ಜಿ.ಶ್ರೀನಿವಾಸರಾಜು<br>ಶ್ರೀ.ನಾ.ದಾಮೋದರ ಶೆಟ್ಟಿ |
| 48) ಜನಪದ ಗೀತೆಗಳು | – | ಪ್ರೊ.ಎಸ್.ಜಿ.ಸಿದ್ದರಾಮಯ್ಯ<br>ಡಾ: ಕೆ.ಆರ್. ಸಂಧ್ಯಾರೆಡ್ಡಿ |
| 49) ಶಿಶು ಸಾಹಿತ್ಯ | – | ಡಾ: ಕಮಲಾ ಹಂಪನಾ |
| 50) ಸರಳ ರಗಳೆಗಳು (ನಾಟಕಗಳು) | – | ಕೃಷ್ಣಮೂರ್ತಿ ಪುರಾಣಿಕರ |

**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್. 69

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದಲ್ಲಿನ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 320 ಎಸ್‌ಜಿಬಿ 85, ದಿನಾಂಕ: 4.12.1985.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಸಸಿವಿ 2004, ದಿನಾಂಕ: 14.1.2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಚಿವಾಲಯದ ಲೋಕೋಪಯೋಗಿ ಮತ್ತು ವಿದ್ಯುಚ್ಛಕ್ತಿ ಇಲಾಖೆಯ ಕಾಡಾ ವಿಭಾಗದಲ್ಲಿ ಈ ಕೆಳಕಂಡ ಹೆಚ್ಚುವರಿ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿತ್ತು.

| | | |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | ಒಂದು ಹುದ್ದೆ |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು ಹುದ್ದೆ |
| 3 | ಸಹಾಯಕ | ಒಂದು ಹುದ್ದೆ |
| 4 | ಬೆರಳಚ್ಚುಗಾರ | ಒಂದು ಹುದ್ದೆ |
| | **ಒಟ್ಟು** | **ನಾಲ್ಕು ಹುದ್ದೆಗಳು** |

ತದನಂತರ ಈ ಹುದ್ದೆಗಳೂ ಸೇರಿದಂತೆ ಈ ಕೆಳಕಂಡ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು ಕೊನೆಯದಾಗಿ ಕ್ರಮ ಸಂಖ್ಯೆ: 2 ರಲ್ಲಿ ಮುಂದುವರಿಸಿದ ಅವಧಿಯು ದಿನಾಂಕ: 31.12.2005 ರಂದು ಮುಕ್ತಾಯಗೊಂಡಿರುತ್ತದೆ. ಆದ್ದರಿಂದ ಸದರಿ ಹುದ್ದೆಗಳನ್ನು ದಿನಾಂಕ: 1.1.2006 ರಿಂದ ಮುಂದುವರೆಸುವ ಕುರಿತು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

| | | |
|---|---|---|
| 1 | ಶಾಖಾಧಿಕಾರಿ | 1 ಹುದ್ದೆ |
| 2 | ಹಿರಿಯ ಸಹಾಯಕ | 1 ಹುದ್ದೆ |
| 3 | ಶೀಘ್ರಲಿಪಿಗಾರ | 1 ಹುದ್ದೆ |
| 4 | ಕಿರಿಯ ಸಹಾಯಕ | 1 ಹುದ್ದೆ |
| 5 | ಬೆರಳಚ್ಚುಗಾರ | 1 ಹುದ್ದೆ |
| 6 | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **7 ಹುದ್ದೆಗಳು** |

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಸಸಿವಿ 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 1.1.2006 ರಿಂದ ದಿನಾಂಕ: 31.12.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | 1 ಹುದ್ದೆ |
| 3 | ಸಹಾಯಕ | 1 ಹುದ್ದೆ |
| 4 | ಬೆರಳಚ್ಚುಗಾರ | 1 ಹುದ್ದೆ |
| 5 | ಶಾಖಾಧಿಕಾರಿ | 1 ಹುದ್ದೆ |
| 6 | ಹಿರಿಯ ಸಹಾಯಕ | 1 ಹುದ್ದೆ |
| 7 | ಶೀಘ್ರಲಿಪಿಗಾರ | 1 ಹುದ್ದೆ |
| 8 | ಕಿರಿಯ ಸಹಾಯಕ | 1 ಹುದ್ದೆ |
| 9 | ಬೆರಳಚ್ಚುಗಾರ | 1 ಹುದ್ದೆ |
| 10 | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **11 ಹುದ್ದೆಗಳು** |

ಸದರಿ ಸರ್ಕಾರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ನೀಡಲಾಗಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 21

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಪಿ. ಹುಸೇನ್ ಸಾಬ್, ದಿನಗೂಲಿ ನೌಕರರವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ:ಆಸಿ:ವಿಸಿ6:65:2001-02, ದಿನಾಂಕ: 29.10/2.11.2004, 16/17.12.2004 ಮತ್ತು 5/6.10.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ತೋಟಗಾರಿಕೆ ಇಲಾಖೆಯಲ್ಲಿ ಹಾಗೂ ವಿವಿಧ ಇಲಾಖೆಗಳಲ್ಲಿ ದಿನಾಂಕ: 1.7.1984ರ ನಂತರ ಸರ್ಕಾರಿ ಸೇವೆಗೆ ಸೇರಿ ದಿನಗೂಲಿ ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ. ಪ್ರಕಾಶ್ ಮತ್ತು ಇತರೇ 133 ಜನ

ದಿನಗೂಲಿ ನೌಕರರ ಪೈಕಿ (ಇವರಲ್ಲಿ ಇಲಾಖೆಯ 17 ಜನ ದಿನಗೂಲಿ ನೌಕರರು ಸೇರಿ) ಶ್ರೀ ಹುಸೇನ್ ಸಾಬ್‌ರವರು ಒಳಗೊಂಡ ದಿನಗೂಲಿ ನೌಕರರ ಸೇವೆಯಲ್ಲಿ ಖಾಯಂಗೊಳಿಸುವಂತೆ ಕೋರಿ ಘನ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 45737-45870:2001ನ್ನು ದಾಖಲಿಸಿದ್ದರು. ಸದರಿ ರಿಟ್ ಅರ್ಜಿಯನ್ನು ಘನ ಉಚ್ಚ ನ್ಯಾಯಾಲಯವು ದಿನಾಂಕ: 21.12.2001 ರಂದು ತೀರ್ಪು ನೀಡಿತ್ತು. ಸದರಿ ತೀರ್ಪಿನ ವಿರುದ್ಧ ರಾಜ್ಯ ಸರ್ಕಾರವು ಎಸ್.ಎಲ್.ಪಿ (ಸಿ.ಸಿ. ಸಂಖ್ಯೆ: 109-498:2003) ದಾಖಲಿಸಿತ್ತು. ಆದರೆ ಸದರಿ ಎಸ್.ಎಲ್.ಪಿ (ಸಿವಿಲ್)ನ್ನು ಘನ ಭಾರತ ಸರ್ವೋಚ್ಚ ನ್ಯಾಯಾಲಯವು ದಿನಾಂಕ: 19.7.2005 ರಂದು ವಜಾ ಮಾಡಿದ ಕಾರಣ, ಘನ ಕರ್ನಾಟಕ ಉಚ್ಚ ನ್ಯಾಯಾಲಯವು ಈಗಾಗಲೇ ನೀಡಿರುವ ತನ್ನ ತೀರ್ಪಿನ ರಿಟ್ ಅಪೀಲ್ ಸಂಖ್ಯೆ: 5697:2000 ಮತ್ತು 6677-7351:2000ರ ತೀರ್ಪು ದಿನಾಂಕ: 24.1.2001 ಹಾಗೂ ಅಪೆಕ್ಸ್ ಕೋರ್ಟ್ ರಿಟ್ ಅಪೀಲ್ ಸಂಖ್ಯೆ: 2735-2795:2000, ದಿನಾಂಕ: 5.11.2001 ರಂದು ನೀಡಿರುವ ತೀರ್ಪಿನ ಪ್ರಕಾರ ಕ್ರಮ ಕೈಗೊಳ್ಳಲು ನಿರ್ದೇಶನ ನೀಡಿತ್ತು. ಈ ಬಗ್ಗೆ ಮೇಲೆ ವಿವರಿಸಿರುವ ದಿನಾಂಕ: 21.12.2001ರ ತೀರ್ಪಿನ ವಿರುದ್ಧ ಸರ್ಕಾರವು ಘನ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅಪೀಲ್ ಸಂಖ್ಯೆ: 2361-2494:2002ನ್ನು ದಾಖಲಿಸಿತ್ತು. ಸದರಿ ರಿಟ್ ಅಪೀಲನ್ನು ಉಚ್ಚ ನ್ಯಾಯಾಲಯವು ದಿನಾಂಕ: 11.2.2003 ರಂದು ರಿಟ್ ಅಪೀಲನ್ನು ಇತ್ಯರ್ಥಪಡಿಸುತ್ತಾ, ದಿನಾಂಕ: 24.1.2001 ರಂದು ನೀಡಿರುವ ತೀರ್ಪಿನ ಪ್ರಕಾರ 10 ವರ್ಷಗಳ ಸತತ ಸೇವೆ ಸಲ್ಲಿಸಿರುವ ಈ ಅರ್ಜಿದಾರರನ್ನು ಮೂಲ ದಾಖಲೆಗಳ ಪರಿಶೀಲನೆ ನಂತರ ಸಕ್ರಮಗೊಳಿಸಲು ಸರ್ಕಾರವು ಅನುಮೋದಿಸಿದೆ.

ಮೇಲೆ ಓದಲಾದ ಪತ್ರದಲ್ಲಿ ತೋಟಗಾರಿಕೆ ಇಲಾಖೆಯಲ್ಲಿ "ಡಿ" ಗ್ರೂಪ್‌ನ ಅನೇಕ ಹುದ್ದೆಗಳು ಖಾಲಿ ಇದ್ದರೂ, ಸಹ ಸರ್ಕಾರದ ಆದೇಶಗಳ ಅನುಸಾರ ಜಿಲ್ಲಾಧಿಕಾರಿಗಳು ಮಾತ್ರ ಖಾಲಿ ಹುದ್ದೆಗಳಿಗೆ ಮರು ಹಂಚಿಕೆ ಮಾಡುವ ಅಧಿಕಾರ ಹೊಂದಿರುತ್ತಾರೆ. ಆದ್ದರಿಂದ ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಿಗೆ ನೇಮಕಾತಿ ಪ್ರಾಧಿಕಾರಿಗಳೇ ಇವರನ್ನು ನೇಮಕ ಮಾಡಲು ಅವಕಾಶವಿಲ್ಲ. ಈ ಹಿನ್ನೆಲೆಯಲ್ಲಿ ಒಂದು ಸೂಪರ್ ನ್ಯೂಮರರಿ ಹುದ್ದೆ ಸೃಷ್ಟಿಸಿ ನೀಡಿದಲ್ಲಿ ಸದರಿ ಹುದ್ದೆಗೆ ಇವರನ್ನು ಸಕ್ರಮಗೊಳಿಸಬಹುದಾಗಿದೆ. ನಂತರ ಇವರ ಹೆಸರನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರಿಗೆ ಕಳುಹಿಸಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗೆ ಮರು ವಿನ್ಯಾಸಗೊಳಿಸಲು ಕೋರಬಹುದಾಗಿದೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 125 ತೋಕಾವಿ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ದಿನಾಂಕ: 1.7.84ರ ನಂತರ ನೇಮಕಗೊಂಡು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ಕೋರಿ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಿದ್ದ ಅರ್ಜಿದಾರರಾದ ಶ್ರೀ ಪಿ. ಹುಸೇನ್ ಸಾಬ್ ಮತ್ತು ಇತರೆ 133 ಮಂದಿ ದಿನಗೂಲಿ ನೌಕರರನ್ನು ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ದಿನಾಂಕ: 6.8.90ರ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಲ್‌ಸಿ 90, ದಿನಾಂಕ: 23.11.95ರ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಲ್‌ಸಿ 95 ಮತ್ತು ದಿನಾಂಕ: 22.9.98ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಎಲ್‌ಸಿ 98ರ ಸೂಚನೆಗಳ ಪ್ರಕಾರ 1 "ಡಿ" ಗ್ರೂಪ್ ಸೂಪರ್ ನ್ಯೂಮರರಿ ಹುದ್ದೆಯನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಸೂಪರ್ ನ್ಯೂಮರರಿ ಹುದ್ದೆಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಹಿನ್ನೆಲೆಯಲ್ಲಿ ಸರ್ಕಾರದಿಂದ ಹೊರಡಿಸಲಾಗಿರುವ ಎಲ್ಲಾ ಸ್ಥಾಯಿ ಆದೇಶಗಳು, ಮಾರ್ಗಸೂಚಿಗಳು ಹಾಗೂ ಇತರೆ ಸೂಚನೆಗಳ ಅನುಗುಣವಾಗಿ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ಈ ಸೂಪರ್ ನ್ಯೂಮರರಿ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು.

ಈ ಆದೇಶವನ್ನು ಸಿಆಸುಇ 901 ಸೇನಿಸಿ 2005, ದಿನಾಂಕ: 16.12.2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿ.ಆರ್. 04

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ENERGY SECRETARIAT

**Sub:** Karnataka Electricity Regulatory Commission - Release of Second Quarter Fund to KERC out of the provision made in the Budget Estimates for the year 2005-06. - Orders reg.

**Read:** Letter No. F/04/3/1452, dated: 7.10.2005.

**PREAMBLE:**

A sum of Rs.206.00 lakhs has been provided in the Budget estimates for the year 2005-06 under the Head of Account 2801-80-101-1-07-KERC-101-GIA (Non-Plan). In the letter dated: 7.10.2005 read above, Secretary, KERC has requested to recoup the Permanent Imprest by releasing Rs.51.14 lakhs to meet the expenditures in the Second quarter of the year 2005-2006 (based on actual expenditure) in order to maintain the balance of Rs.75.00 lakhs in the Permanent Imprest Account sanctioned vide G.O. dated: 19.10.2002. Hence, this order.

**GOVERNMENT ORDER NO. EN 392 NCE 2005, BANGALORE, DATED: 22nd DECEMBER 2005**

In the circumstances explained in the preamble, Government are pleased to release, the amount of Rs.51.14 lakhs (Rupees Fifty one Lakhs Fourteen Thousand Only) based on the actual expenditure incurred by the Karnataka Electricity Regulatory Commission (KERC) under the Head of Account **"2801-80-101-1-07-KERC-101-GIA (Non-Plan)"** to meet the expenditure for the Second (II) Quarter of the year 2005-06 and to maintain the balance of Rs.75.00 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No.FD/2162/Exp-I/2005, dated: 13.12.2005.

By Order and in the name of the Governor of Karnataka,

**SURESH .B. KRISHNAPPANAVAR**

P.R. 01 Under Secretary to Government, Energy Department.

**CORRIGENDUM NO. EN 388 NCE 2005, BANGALORE, DATED: 27th/28th DECEMBER 2005**

For the condition No.(1) & (2) mentioned in Government letter No. DE 152 NCE 2001, dated: 21.1.2002 & dated: 03.9.2002 i.e.

"The Company shall obtain separate clearance from Chamundeshwari Electricity Supply Corporation (CESCO) in respect of evacuation of power."

**Shall be substituted and read as:-**

"The Company shall enter into a Wheeling and Banking Agreement with appropriate agency in case of selling power to the party and Power Purchase Agreement in case of selling power to Chamundeshwari Electricity Supply Corporation (CESCO)".

By Order and in the name of the Governor of Karnataka,

**SURESH .B. KRISHNAPPANAVAR**

P.R. 07 Under Secretary to Government, Energy Department.

**Sub:** Transfer of 1.25 M.W. Wind Power Capacity (Wind Mill Project) in favour of M/s Allegro Ventures India Private Limited – reg.

**Read:**
1) Government order No: DE 26 NCE 1999 dated: 13.5.1999.
2) Government order No: DE 346 NCE 2004 dated: 9.11.2004.
3) Letter No. KRED/08/AVIPL/2005/2383 dated: 21.12.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 9.11.2004 read at (2) above, sanction has been accorded for implementation of 18.75 MW capacity Wind Power Project (Wind Mill Project) at Gujanur Site Bellary District to M/s Suzlon Energy Ltd.

Now, the Managing Director, Karnataka Renewable Energy Development Limited, Bangalore in his letter dated : 21.12.2005 read at (3) above, has recommended to the Government for transfer of 1.25 MW Wind Power capacity (Wind Mill Project) in favour of M/s. Allegro Ventures India Private Limited from out of sanctioned 18.75 MW Wind Power Capacity at Gujanur Site Bellary District to M/s Suzlon Energy Ltd.

The proposal has been examined and pass the following order.

**GOVERNMENT ORDER NO. EN 392 NCE 2005, BANGALORE, DATED 27th DECEMBER 2005**

Government is pleased to accord sanction for transfer of 1.25 MW Wind Power capacity (Wind Mill Project) in favour of M/s. Allegro Ventures India Private Limited from out of sanctioned 18.75 MW Wind Power Capacity (Wind Mill Project) at Gujanur Site, Nagtibassapur and Shivalinganahalli village of Bellary District to M/s Suzlon Energy Ltd.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

**SURESH .B. KRISHNAPPANAVAR**

P.R. 08 Under Secretary to Government, Energy Department.

**Sub:** Cancellation of Wind Power capacities made in favour of M/S Aradhya Steel Wires Pvt. Limited, M/s Agarwal Enterprises and M/s Vandana Ispat Ltd., at Chitradurga District-reg.

**Read:**
1) Government order No: EN 18 NCE 2005 dated: 3.2.2005.
2) Government order No: EN 53 NCE 2005 dated: 7.3.2005.
3) Government order No: EN 130 NCE 2005 dated: 12.5.2005.
4) Letter No. KREDL/08/KEL/2005/2223 dated: 24.11.2005 received from MD, KREDL, Bangalore.

**PREAMBLE:**

In the Government Order read at (1) above, sanction has been accorded to M/S Aradhya Steel Wires Pvt. Limited, for transfer of 1.25 MW Wind Power capacity from out of 15 MW capacity of M/s Kurumaradikere Energy Limited at Ingaldala village of Chitradurga District.

In the Government Order read at (2) above, sanction has been accorded to M/s Agarwal Enterprises, for transfer of 1.25 MW Wind Power capacity from out of 15 MW capacity of M/s Kurumaradikere Energy Limited at Ingaldala village of Chitradurga District.

In the Government Order read at (3) above, sanction has been accorded to M/s Vandana Ispat Ltd, for transfer of 2.5 MW Wind Power capacity from out of 12.5 MW capacity of M/s Kurumaradikere Energy Limited at Madakaripura wind zone of Chitradurga District.

In the letter read at (4) above the Managing Director, Karnataka Renewable Energy Development Limited, Bangalore has stated that the above 3 Projects have hampered because of the litigation of the project land between M/s Kurumaradikere Energy Limited and M/s Hutti Gold Mines Limited and recommended for cancellation of all the 3 Projects.

After examining the proposal at the Government level, hence the following order.

**GOVERNMENT ORDER NO. EN 376 NCE 2005, Bangalore, Dated: 26th DECEMBER 2005**

Government is pleased to cancel the following projects with immediate effect as detailed below:

| Sl. No. | Name and address of the Company | Capacity in MW |
|---|---|---|
| 1. | M/S Aradhya Steel Wires Pvt. Limited,<br>"Aradhaya House" K.B. Extension, Davangere-577002. | 1.25 |
| 2. | M/s Agarwal Enterprises,<br>No: 364, Gokale Road, Near Deep Bangalore, Pune-411 016. | 1.25 |
| 3. | M/s Vandana Ispat Ltd.,<br>Vandana Building, M.G. Road, Raipur-492 001. | 2.5 |

By Order and in the name of the Governor of Karnataka,

**SURESH .B. KRISHNAPPANAVAR**

P.R. 09 Under Secretary to Government, Energy Department.

**Sub:** Transfer of 0.8 MW Wind Power Capacity (Wind Mill Project) in favour of M/s Dewanchand Ramsaran-reg.

**Read:** 1) Government order No: DE 26 NCE 1999 dated : 13.5.1999.
2) Government order No: EN 76 NCE 2005 dated : 18.3.2005.
3) Letter No. KRED/08/SDR/2005/2319 dated: 12.12.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 192 MW capacity Wind Power Project (Wind Mill Project) at Chitradurga District to M/s Enercon (I) Ltd.

Now, the Managing Director, Karnataka Renewable Energy Development Limited, Bangalore in his letter dated : 12.12.2005 read at (3) above, has recommended to the Government for transfer of 0.8 MW Wind Power capacity (Wind Mill Project) in favour of M/s Dewanchand Ramsaran from out of sanctioned 192 MW Wind Power Capacity at Lakkihalli village, Hosadurga Taluk, Chitradurga District to M/s Enercon (I) Limited.

The proposal has been examined and pass the following order.

**GOVERNMENT ORDER NO. EN 384 NCE 2005, BANGALORE, DATED 28th DECEMBER 2005**

Government is pleased to accord sanction for transfer of 0.8 MW Wind Power capacity (Wind Mill Project) in favour of M/s. Dewanchand Ramsaran from out of sanctioned 192 MW Wind Power Capacity (Wind Mill Project) at Lakkihalli village, Hosadurga Taluk, Chitradurga District to M/s Enercon (I) Limited.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

**SURESH .B. KRISHNAPPANAVAR**

P.R. 53 Under Secretary to Government, Energy Department.

**Sub:** Enhancement of allotted capacity of Wind Power Project (Wind Mill Project) from 3 MW to 5.4 MW by M/s Sarjan Realities Limited-reg.

**Read:** 1) Government Order No : DE 59 NCE 2004, dated: 8.3.2004.

2) Letter No : KRED / 08 / SRPL / 2005 / 2337, dated : 13.12.2005 received from the Managing Director, Karnataka Renewable Energy Development Limited, Bangalore.

**PREAMBLE**:

In the Government order read at (1) above, the sanction has been accorded to implement 3 MW capacity Wind Power Project (Wind Mill Project) at Halavagalu village in Bellary District to M/s Sarjan Realities Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, has recommended to Government to enhance the capacity from 3 MW to 5.4 MW vide his letter read at (2) above.

The proposal has been examined and pass the following order :

**Government Order No: EN 386 NCE 2005, Bangalore, Dated: 28th DECEMBER 2005**

Government is pleased to accord sanction to M/s Sarjan Realities Limited, for enhancement of the capacity of Wind Power Project (Wind Mill Project) from 3 MW to 5.4 MW at Ridge located on the north of Halavagalu village with 682 m peaks is bounded by the corresponding geographical co-ordinates (Longitutde from–$75^0$ 46' 10" to $75^0$ 47' 25" and Latitude- $14^0$ 43' 10" to $14^0$ 43' 50") in Bellary District.

The other terms and conditions of the allotment order shall continue as it is.

By Order and in the name of the Governor of Karnataka,

**SURESH .B. KRISHNAPPANAVAR**

P.R. 54 Under Secretary to Government, Energy Department.

**Sub:** Enhancement of allotted capacity of Wind Power Project (Wind Mill Project) from 33 MW to 44.4 MW by M/s Sarjan Realities Limited-reg.

**Read:** 1) Government Order No : DE 59 NCE 2004, dated : 8.3.2004.

2) Letter No : KRED / 08 / SRPL / 2005 / 2355, dated: 16.12.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) above, the sanction has been accorded to implement 33 MW capacity Wind Power Project (Wind Mill Project) at Maddapura and Horogoppa villages Shimoga District to M/s Sarjan Realities Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, has recommended to Government to enhance the capacity from 33 MW to 44.4 MW vide his letter read at (2) above.

The proposal has been examined and pass the following order :

**Government Order No: EN 393 NCE 2005, Bangalore, Dated: 28th DECEMBER 2005**

Government is pleased to accord sanction to M/s Sarjan Realities Limited, for enhancement of the capacity of Wind Power Project (Wind Mill Project) from 33 MW to 44.4 MW at Northwest Southeast oriented ridge named as Kalavi Ranganagudda located on the north of Maddapura village is bounded by corresponding geographical co-ordinates (Longitutde from–$75^0$ 30' to $75^0$ 32' and Latitude- $14^0$ 7' 40" to $14^0$ 9' 40") and 3 ridges in Gangavannadasara state forest with peaks 968, 956 and 978 M m.a.s.l are located norteast of Horogoppa village is bounded by the corresponding geographical co-ordinates (Longitutde from–$75^0$ 26' 10" to $75^0$ 29' 10" and Latitude- $14^0$ 10' to $14^0$ 12' 50") in Shimoga District to M/s Sarjan Realities Limited.

The other terms and conditions of the allotment order shall continue as it is.

By Order and in the name of the Governor of Karnataka,

**SURESH .B. KRISHNAPPANAVAR**

P.R. 55 Under Secretary to Government, Energy Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಸಸಿವಿ 2002, ದಿನಾಂಕ: 29.1.2003.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2003, ದಿನಾಂಕ: 29.12.2003.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2004, ದಿನಾಂಕ: 6.11.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 29.1.2003ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 29.10.1999 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.12.2003 ರವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ - ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ಪ್ರಧಾನ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿ ಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಲಾಗಿರುತ್ತದೆ.

ಪ್ರಸ್ತುತ ಈ ಹುದ್ದೆಯ ಕಾಲಾವಧಿಯು ದಿನಾಂಕ: 31.12.2005ಕ್ಕೆ ಮುಕ್ತಾಯಗೊಳ್ಳಲಿರುವುದರಿಂದ ಈ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 93 ಸಸಿವಿ 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2006 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 22

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ, ಸಮಾಜ ಕಲ್ಯಾಣ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 61 ಸಸಿವಿ 2004, ದಿನಾಂಕ: 30.7.2004.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2005, ದಿನಾಂಕ: 28.3.2005.
3) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಕಇ (ಅಕಾ) 163/ಪ್ರ.ಕಾ. 2005, ದಿನಾಂಕ: 6.12.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ (ಅಲ್ಪ ಸಂಖ್ಯಾತರ ಕಲ್ಯಾಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಯೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ (ಅಲ್ಪ ಸಂಖ್ಯಾತರ ಕಲ್ಯಾಣ) ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಎಂದು ಮರುಪದನಾಮೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ದಿನಾಂಕ: 28.2.2005ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2005 ರಲ್ಲಿ ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಮರುಪದನಾಮೀಕರಿಸಿರುವ ಅವಧಿಯು ದಿನಾಂಕ: 27.2.2006ಕ್ಕೆ ಮುಕ್ತಾಯಗೊಳ್ಳಲಿರುವುದರಿಂದ ಮುಂದುವರೆಸಿ ಆದೇಶ ಹೊರಡಿಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 285 ಸಸಿವಿ 2005, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2005**

ಕರ್ನಾಟಕ ಸರ್ಕಾರದ ಸಚಿವಾಲಯದ ಸಮಾಜ ಕಲ್ಯಾಣ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಉನ್ನತೀಕರಿಸಿದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 28.2.2006 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 23

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಜಲ ಸಂಪನ್ಮೂಲ ಸಚಿವಾಲಯ

**ಸೇರ್ಪಡೆ ಆದೇಶ ಸಂಖ್ಯೆ: ಜಸಂಇ 86 ಎಂಟಿಜೆಡ್ 2005, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಸರ್ಕಾರದ ಆದೇಶ ಸಂಖ್ಯೆ: ಜಸಂಇ 78 ಡಬ್ಲ್ಯೂಬಿಎಂ 2003, ದಿನಾಂಕ: 24.2.2004 ರಲ್ಲಿನ ಅನುಬಂಧದ ಕ್ರಮ ಸಂಖ್ಯೆ 21 ರಲ್ಲಿ **"ಮುಲ್ಲಾಮಾರಿ ಯೋಜನೆ"** ಎಂಬುದರ ಬದಲಿಗೆ, **"ಮುಲ್ಲಾಮಾರಿ ಮೇಲ್ದಂಡೆ ಯೋಜನೆ"** ಎಂಬುದಾಗಿ ತಿದ್ದುಪಡಿ ಮಾಡಿ ಓದಿಕೊಳ್ಳುವಂತೆ ಆದೇಶಿಸಲಾಗಿದೆ.

ಹಾಗೂ ಸದರಿ ಆದೇಶ ಸಂಖ್ಯೆ: ಜಸಂಇ 78 ಡಬ್ಲ್ಯೂಬಿಎಂ 2003, ದಿನಾಂಕ: 24.2.2004ರ ಅನುಬಂಧದಲ್ಲಿನ ಕ್ರಮ ಸಂಖ್ಯೆ: 21ರ ನಂತರ ಕ್ರಮ ಸಂಖ್ಯೆ:22ನ್ನು **"ಮುಲ್ಲಾಮಾರಿ ಕೆಳದಂಡೆ ಯೋಜನೆ"** ಎಂಬುದಾಗಿ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು, ಹಾಗೂ ಸದರಿ ಯೋಜನೆಗೆ ಈ ಕೆಳಕಂಡ ಸಮಿತಿಯನ್ನು ರಚಿಸಿ ಸೇರ್ಪಡೆ ಮಾಡಲಾಗಿದೆ.

**22 ಮುಲ್ಲಾಮಾರಿ ಕೆಳದಂಡೆ ಯೋಜನೆ**

| ಕ್ರಮ ಸಂಖ್ಯೆ | ವಿವರ | ಷರಾ |
|---|---|---|
| 1 | ಜಿಲ್ಲಾಧಿಕಾರಿಗಳು, ಗುಲ್ಬರ್ಗಾ. | ಛೇರ್ಮನ್ |
| 2 | ಆಡಳಿತಾಧಿಕಾರಿಗಳು, ಕಾಡಾ, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ. | ಸದಸ್ಯರು |
| 3 | ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಗುಲ್ಬರ್ಗಾ. | ಸದಸ್ಯರು |
| 4 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ಕೆಳದಂಡೆ ಮುಲ್ಲಮಾರಿ ಯೋಜನೆ) | ಸದಸ್ಯರು |
| 5 | ಅಧೀಕ್ಷಕ ಅಭಿಯಂತರರು, ಕನೀನಿನಿ, ನೀರಾವರಿ ಯೋಜನೆ ನಿರ್ಮಾಣ ವೃತ್ತ, ಗುಲ್ಬರ್ಗಾ. | ಸದಸ್ಯ ಕಾರ್ಯದರ್ಶಿ |
| 6 | ಕಾರ್ಯಪಾಲಕ ಅಭಿಯಂತರರು, ಕೆಪಿಟಿಸಿಎಲ್, ಗುಲ್ಬರ್ಗಾ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 58

**ಐ.ಡಿ. ಧಮನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ವಿಶೇಷ ಕೋಶ).

## ಆರ್ಥಿಕ ಸಚಿವಾಲಯ

**ವಿಷಯ:** ಖಜಾನೆಗಳಲ್ಲಿ ವರ್ಷಾಂತ್ಯದ ಬಿಲ್ಲುಗಳನ್ನು ಮಾರ್ಚ್ 31ರಂದೇ ತೀರ್ಣಗೊಳಿಸಿ ಲೆಕ್ಕವನ್ನು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ ಆಇ 17 ಬಿಪಿಇ 2004, ದಿನಾಂಕ 13–12–2004.

**ಪ್ರಸ್ತಾವನೆ:**

2004–05ನೇ ಸಾಲಿನ ವರ್ಷಾಂತ್ಯದ ಬಿಲ್ಲುಗಳನ್ನು ಖಜಾನೆಗಳಲ್ಲಿ ಸ್ವೀಕರಿಸಿ ತೀರ್ಣಗೊಳಿಸಿ ದಿನಾಂಕ 31–3–2005 ರಂದೇ 2004–05ನೇ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸಲು ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕಾಲಮಿತಿ ನಿಗದಿಪಡಿಸಿ ವೇಳಾಪಟ್ಟಿಯನ್ನು ನಿಗದಿಪಡಿಸಲಾಗಿತ್ತು. ಸದರಿ ವೇಳಾಪಟ್ಟಿಯಂತೆ ಇಲಾಖಾ ಅಧಿಕಾರಿಗಳು ಹಾಗೂ ಖಜಾನಾಧಿಕಾರಿಗಳು ಸೂಕ್ತ ಕ್ರಮ ಕೈಗೊಂಡಿದ್ದು ಯೋಜನೆಯನ್ನು ಯಶಸ್ವಿಯಾಗಿ ನಿರ್ವಹಿಸಲಾಗಿದೆ.

2005–06ನೇ ಸಾಲಿನ ವರ್ಷಾಂತ್ಯದ ಬಿಲ್ಲುಗಳನ್ನು ಸಹ ಖಜಾನೆಗಳಲ್ಲಿ ಸ್ವೀಕರಿಸಿ ತೀರ್ಣಗೊಳಿಸಿ ದಿನಾಂಕ 31–3–2006ರಂದೇ 2005–06ನೇ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸಲು ಸೂಕ್ತ ವೇಳಾಪಟ್ಟಿಯನ್ನು ನೀಡಿ ಸಾಕಷ್ಟು ಮುಂಚಿತವಾಗಿ ಆದೇಶವನ್ನು ಹೊರಡಿಸುವುದು ಅವಶ್ಯವಿದೆಯೆಂದು ಖಜಾನೆ ನಿರ್ದೇಶಕರು ಸರ್ಕಾರವನ್ನು ಕೋರಿದ್ದಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 02 ಬಿಪಿಇ 2006, ಬೆಂಗಳೂರು, ದಿನಾಂಕ: 21ನೇ ಜನವರಿ 2006**

1. **EAP,** ಕೇಂದ್ರ ಪುರಸ್ಕೃತ ಹಾಗೂ ಕೇಂದ್ರ ಯೋಜನೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಅನುದಾನ ಬಿಡುಗಡೆ ಆದೇಶಗಳನ್ನು ದಿನಾಂಕ: **14–2–2006**ರೊಳಗೆ ಸಂಬಂಧಿಸಿದ ಇಲಾಖಾಧಿಕಾರಿಗಳು ಹೊರಡಿಸತಕ್ಕದ್ದು. ಈ ಸಂಬಂಧ ಅವರ ಅಧೀನದ ನಿಯಂತ್ರಣಾಧಿಕಾರಿಗಳು ಅಪ್‌ಲೋಡಿಂಗ್ ಕಾರ್ಯವನ್ನು ದಿನಾಂಕ: 15–3–2006ರೊಳಗೆ ಮುಕ್ತಾಯಗೊಳಿಸಬೇಕು.
2. ದಿನಾಂಕ: **14–2–2006**ರ ಹಾಗೂ ಅದಕ್ಕೂ ಮುಂಚಿತ ಅವಧಿಯ ಎಲ್ಲಾ ಪ್ರಯಾಣದ ಬಿಲ್ಲುಗಳನ್ನು ದಿನಾಂಕ: **28–2–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
3. ದಿನಾಂಕ: **14–2–2006**ರ ಹಾಗೂ ಅದಕ್ಕೂ ಮುಂಚಿತ ಅವಧಿಯಲ್ಲಿ ಭರಿಸಿದ ಎಲ್ಲಾ ಸಾದಿಲ್ವಾರು ಬಿಲ್ಲುಗಳನ್ನು ದಿನಾಂಕ: **28–2–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
4. ದಿನಾಂಕ: **14–2–2006**ರ ನಂತರ ಭರಿಸಿದ ವೆಚ್ಚಗಳಿಗೆ ಸಂಬಂಧಿಸಿದ ಎಲ್ಲಾ ಸಾದಿಲ್ವಾರು/ಪ್ರಯಾಣ ಭತ್ಯೆ ಬಿಲ್ಲುಗಳನ್ನು ದಿನಾಂಕ: **15–3–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
5. ವಿದ್ಯುಚ್ಛಕ್ತಿ, ದೂರವಾಣಿ ಹಾಗೂ ಕಟ್ಟಡ ಬಾಡಿಗೆಗೆ ಸಂಬಂಧಿಸಿದ ಬಿಲ್ಲುಗಳನ್ನು ದಿನಾಂಕ: **15–3–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
6. ಎಲ್ಲಾ ಸಂಕ್ಷಿಪ್ತ ಸಾದಿಲ್ವಾರು ಬಿಲ್ಲುಗಳನ್ನು ದಿನಾಂಕ: **10–3–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
7. ಮಾರ್ಚ್ 2006ರೊಳಗೆ ಪಾವತಿಸಲ್ಪಡುವ ಅನುದಾನಿತ ವೇತನ ಬಿಲ್ಲುಗಳನ್ನು ದಿನಾಂಕ: **15–3–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
8. ಏಪ್ರಿಲ್‌ನಲ್ಲಿ ಪಾವತಿಸಲಾಗುವ ಎಲ್ಲಾ ವೇತನ ಬಿಲ್ಲುಗಳನ್ನು ದಿನಾಂಕ **15–3–2006** ರಿಂದ **20–3–2006**ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.

9. ಇಲಾಖಾಧಿಕಾರಿಗಳು ಅನುದಾನದ ಮನರ್ವಿನಿಯೋಗ (Re-appropriation)ದ ಕಾರ್ಯವನ್ನು ದಿ: 10–3–2006ರೊಳಗೆ ಮುಕ್ತಾಯಗೊಳಿಸಬೇಕು.
10. **EAP,** ಕೇಂದ್ರ ಪುರಸ್ಕೃತ ಹಾಗೂ ಕೇಂದ್ರ ಯೋಜನೆ ಬಿಲ್ಲುಗಳನ್ನು ಆಗಿಂದಾಗ್ಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
11. ದಿನಾಂಕ **31–3–2006**ರ ಅಪರಾಹ್ನ 2.30ರ ನಂತರ ಯಾವುದೇ ಬಿಲ್ಲುಗಳನ್ನು ಖಜಾನೆಗೆ ಸಲ್ಲಿಸುವುದನ್ನು ನಿರ್ಬಂಧಿಸಲಾಗಿದೆ.
12. ಎಲ್ಲಾ ಖಜಾನೆಗಳಲ್ಲಿ ಲೆಕ್ಕಗಳನ್ನು ಅಂತಿಮಗೊಳಿಸಲು ಅನುಕೂಲವಾಗುವಂತೆ ದಿನಾಂಕ **1–4–2006**ನ್ನು ವ್ಯವಹಾರ ರಹಿತ ದಿನವನ್ನಾಗಿ ಘೋಷಿಸಲಾಗಿದೆ.
13. ಎಲ್ಲಾ ಹಣ ಭರವಸೆ ಪತ್ರ **(L.O.C.)** ಗಳನ್ನು ದಿನಾಂಕ **10–3–2006**ರೊಳಗೆ ನೀಡತಕ್ಕದ್ದು. ಹಣ ಭರವಸೆ ಪತ್ರಗಳ ಮೇಲೆ ವ್ಯವಹರಿಸಲ್ಪಡುವ ಎಲ್ಲಾ ಇಲಾಖೆಗಳು ದಿನಾಂಕ **31–3–2006**ರೊಳಗೆ ಲೆಕ್ಕ ಹೊಂದಾಣಿಕೆಯನ್ನು ಮಾಡಿಕೊಳ್ಳತಕ್ಕದ್ದು.
14. ಖಜಾನೆಗಳು ಮಾರ್ಚ್ 2006ರ ಲೆಕ್ಕಗಳನ್ನು 31ನೇ ಮಾರ್ಚ್ 2006ರ ನಂತರವೂ ತೆರೆದಿರಕೂಡದೆಂದು ಸೂಚಿಸಲಾಗಿದೆ.
15. ಸರ್ಕಾರಕ್ಕೆ 2005–06ರ ತಾತ್ಕಾಲಿಕ ಲೆಕ್ಕಗಳು ಮೇ 2006ರ 10ನೇ ತಾರೀಖಿನ ಒಳಗೆ ದೊರೆಯಲು ಅನುಕೂಲವಾಗುವಂತೆ ಖಜಾನೆಗಳು ಮಾರ್ಚ್ 2006ರ ಲೆಕ್ಕಗಳನ್ನು ಮಹಾಲೇಖಪಾಲರು (ಎ ಮತ್ತು ಇ), ಕರ್ನಾಟಕ ಇವರಿಗೆ ಕಳುಹಿಸಲು ವ್ಯವಸ್ಥೆ ಮಾಡತಕ್ಕದ್ದು.
16. ಇಲಾಖಾ ಮುಖ್ಯಸ್ಥರು ಮತ್ತು ಅವರುಗಳ ಹಣ ಪಡೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ತಿಳಿಸಿರುವ ವೇಳಾ ಪಟ್ಟಿಯಂತೆ ಕ್ರಮ ಕೈಗೊಳ್ಳತಕ್ಕದ್ದು ಮತ್ತು ಆರ್ಥಿಕ ಮಿತವ್ಯಯ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ದಿ: 30–3–2006 ರಂದು ಚಂದ್ರಮಾನ ಯುಗಾದಿಯ ಪ್ರಯುಕ್ತ ರಜಾ ದಿನವಾಗಿರುತ್ತದೆ.
17. ಸರ್ಕಾರದ ಆದೇಶ ಸಂಖ್ಯೆ ಆಇ 2 ಟಿಎಫ್‌ಸಿ 2004, ದಿನಾಂಕ 9–9–2004ರಲ್ಲಿ ತಿಳಿಸಿರುವ ಸೂಚನೆಗಳನ್ನು ಸಹ ಗಮನದಲ್ಲಿಟ್ಟುಕೊಂಡು ಮೇಲೆ ಹೇಳಿರುವ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆಯವ್ಯಯದಲ್ಲಿ ನಿಗಧಿ ಪಡಿಸಿರುವ ಮೊತ್ತವನ್ನು ದಿನಾಂಕ 31–3–2006ರೊಳಗೆ ವೆಚ್ಚ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 133

**ಎಸ್. ಸುಬ್ರಮಣ್ಯ**
ಸರ್ಕಾರದ ಕಾರ್ಯದರ್ಶಿ, (ಆಯವ್ಯಯ ಮತ್ತು ಸಂಪನ್ಮೂಲ)
ಆರ್ಥಿಕ ಇಲಾಖೆ.

## ಶಿಕ್ಷಣ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಇಡಿ 211 ಇಟಿಆರ್ 2005, ಬೆಂಗಳೂರು, ದಿನಾಂಕ: 18ನೇ ಜನವರಿ 2006**

**ವಿಷಯ:** 2006–07ನೇ ಸಾಲಿನಿಂದ ಹಾಗೂ ನಂತರ ಅನ್ವಯಿಸುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ವರ್ಗಾವಣೆಯನ್ನು ಕೌನ್ಸಿಲಿಂಗ್ ಮೂಲಕ ಮಾಡುವ ಮಾರ್ಗಸೂಚಿಗಳು.

**ಉಲ್ಲೇಖ:**
1) ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 2/ಇಟಿಆರ್/2000 ದಿನಾಂಕ: 16.5.2000
2) ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 187/ಇಟಿಆರ್/2001 ದಿನಾಂಕ: 24.5.2001
3) ಸರ್ಕಾರದ ಆದೇಶ ಸಂಖ್ಯೆ: ಇಡಿ 277/ಡಿಪಿಐ/2002 ದಿನಾಂಕ: 22.4.2002 ಹಾಗೂ 8.5.2002.
4) ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 326/ಇಟಿಆರ್/2002 ದಿನಾಂಕ: 4.10.2002 ಮತ್ತು 2.11.02
5) ಸುತ್ತೋಲೆ ಸಂಖ್ಯೆ: ಇಡಿ 448/ಇಟಿಆರ್/2002 ದಿನಾಂಕ: 22.2.2003
6) ನಿರ್ದೇಶಕರು(ಪ್ರಾಥಮಿಕ ಶಿಕ್ಷಣ) ಇವರ ಪತ್ರ ಸಮ ಸಂಖ್ಯೆ ಸಿ3(7) ಪ್ರಾ.ಶಿ.ವರ್ಗ 76/2004–05 ದಿನಾಂಕ: 3.02.2005
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 111 ಸೇನೆವಿ 2005 ದಿನಾಂಕ: 29.8.05

1.1 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಸರ್ಕಾರ ಈ ಹಿಂದೆ ಒಂದೆರಡು ವರ್ಷಗಳು ಕೌನ್ಸಿಲಿಂಗ್ ಮೂಲಕ ಶಿಕ್ಷಕರನ್ನು ವರ್ಗಾಯಿಸುವ ವಿಧಾನವನ್ನು ಅಳವಡಿಸಿತು.

1.2 ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಮಾಡುವುದರಿಂದ ವರ್ಗಾವಣೆ ಪ್ರಕ್ರಿಯೆ ಪಾರದರ್ಶಕವಾಗಿರುವುದು ಕಂಡು ಬಂದಿದೆ. ಇದಲ್ಲದೆ ಕೌನ್ಸಿಲಿಂಗ್ ಪ್ರಕ್ರಿಯೆಯಿಂದ ಶಿಕ್ಷಕರು ತಮ್ಮ ವರ್ಗಾವಣೆಗಾಗಿ ಒತ್ತಡಗಳನ್ನು ತರುವುದು, ಶಾಲೆಗಳನ್ನು ಬಿಟ್ಟು ಕಛೇರಿಗಳಲ್ಲಿ ಅಲೆದಾಡುವುದು, ಮಧ್ಯವರ್ತಿಗಳನ್ನು ಸಂಪರ್ಕಿಸುವುದು, ಮತ್ತಿತರ ಲೋಪದೋಷಗಳನ್ನು ತಡೆಯಲು ಸಾಧ್ಯವಾಗುವುದು. ಈ ಹಿನ್ನೆಲೆಯಲ್ಲಿ ಸದರಿ ವಿಷಯದ ಕುರಿತು ಸರ್ಕಾರ ಈ ಕೆಳಕಂಡ ಮಾರ್ಗಸೂಚಿಗಳನ್ನು ಈ ಮೂಲಕ ನಿಗದಿಪಡಿಸಿದೆ.

2. ಕೌನ್ಸಿಲಿಂಗ್ ಮೂಲಕ ಶಿಕ್ಷಕರ ವರ್ಗಾವಣೆ ಮಾಡಲು ಸಾಮಾನ್ಯ ಸೂಚನೆಗಳು ಹಾಗೂ ವಿಧಾನ

2.1 ಮೇಲ್ಕಾಣಿಸಿದ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ 2006–07 ಹಾಗೂ ನಂತರ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರ ಸಾರ್ವತ್ರಿಕ ವರ್ಗಾವಣೆಗಳನ್ನು ಕೌನ್ಸಿಲಿಂಗ್ ಮೂಲಕವೇ ಮಾಡತಕ್ಕದ್ದು.

2.2 ವರ್ಗಾವಣೆ ನೀತಿಯನ್ವಯ, ಸಾಮಾನ್ಯ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಮಾತ್ರ ಮಾಡತಕ್ಕದ್ದು.

2.3 ಸಾಮಾನ್ಯ ವರ್ಗಾವಣೆಗಳನ್ನು ಜೇಷ್ಠತಾ ಘಟಕದೊಳಗೆ ಅಂದರೆ ನೇಮಕಾತಿ ಪ್ರಾಧಿಕಾರದ ಕಾರ್ಯವ್ಯಾಪ್ತಿ (Jurisdiction) ಯೊಳಗೆ ಮಾತ್ರ ಮಾಡಬೇಕು. 2001ನೇ ಸಾಲಿನಿಂದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಕ್ಷೇತ್ರ (ಬ್ಲಾಕ್) ಮತ್ತು ಪ್ರೌಢಶಾಲಾ ಶಿಕ್ಷಕರಿಗೆ ಶೈಕ್ಷಣಿಕ ಜಿಲ್ಲೆಯು ನೇಮಕಾತಿ ಘಟಕವಾಗಿರುತ್ತದೆ.

2.4 ಅಂತರ ಘಟಕ ವರ್ಗಾವಣೆಗಳನ್ನು ಕರ್ನಾಟಕ ಸಿವಿಲ್ ಸೇವೆಗಳು(ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16–ಎ, ಇದರಡಿ ಪರಿಗಣಿಸಬೇಕಾಗುತ್ತದೆ.

2.5 ಸದರಿ ನಿಯಮದಂತೆ, ಅಂತಹ ಅಂತರ ಘಟಕ ವರ್ಗಾವಣೆಗಳನ್ನು ಮಾಡಲು ಇಲಾಖಾ ಮುಖ್ಯಸ್ಥರು ಸಕ್ಷಮ ಪ್ರಾಧಿಕಾರವಾಗಿರುತ್ತಾರೆ. ಅದರ ಪ್ರಕಾರ ಆಯಾಯ ಆಯುಕ್ತಾಲಯಗಳಿಗೆ ಸಂಬಂಧಿಸಿದಂತೆ ಅಲ್ಲಿನ ನಿರ್ದೇಶಕರುಗಳು ತಮ್ಮ ಕಾರ್ಯ ವ್ಯಾಪ್ತಿಯೊಳಗೆ ವರ್ಗಾವಣೆಗಳನ್ನು ಮಾಡಲು ಆಸ್ಪದ ಇರುತ್ತದೆ.

2.6 ಪ್ರತಿ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯಾ ಬಲದ ಶೇ.5ಕ್ಕಿಂತ ಹೆಚ್ಚು ವರ್ಗಾವಣೆಗಳನ್ನು ಮಾಡಬಾರದು.

2.7 ಜೇಷ್ಠತಾ ಘಟಕದ ಹೊರಗಿನ (ಅಂದರೆ, ಅಂತರ ಘಟಕ) ವರ್ಗಾವಣೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರಕರಣಗಳಲ್ಲಿ ಲಭ್ಯವಿರುವ ಖಾಲಿ ಹುದ್ದೆಗಳ ಆಧಾರದ ಮೇಲೆ ಗಣಕೀಕರಣದ ಮೂಲಕ ವರ್ಗಾವಣೆಯ ಕೌನ್ಸಿಲಿಂಗ್ ಮಾಡಬೇಕು ಹಾಗೂ ಕೂಡಲೇ ಸಂಬಂಧಿಸಿದ ಉಪನಿರ್ದೇಶಕರು, ಕ್ಷೇತ್ರ ಶಿಕ್ಷಣಾಧಿಕಾರಿಯ ಸಮಕ್ಷಮದಲ್ಲಿ, ಆದೇಶ ಹೊರಡಿಸಿ ಒಂದು ಪ್ರತಿಯನ್ನು ಸ್ಥಳದಲ್ಲೇ ಶಿಕ್ಷಕರಿಗೂ ಒಂದು ಪ್ರತಿ ಕ್ಷೇತ್ರ ಶಿಕ್ಷಣಾಧಿಕಾರಿಗೂ ನೀಡುವುದು.

2.8 ಖಾಲಿ ಇರುವ ಹುದ್ದೆಗಳಿಗೆ ಮಾತ್ರ ವರ್ಗಾವಣೆ ಮಾಡತಕ್ಕದ್ದು. ಈ ಮಾರ್ಗಸೂಚಿಯಲ್ಲಿ ಅವಕಾಶಕಲ್ಪಿಸಿರುವಂತೆ ನಗರ ಪ್ರದೇಶದಲ್ಲಿನ ಶಿಕ್ಷಕರ ವರ್ಗಾವಣೆ ಮಾಡುವ ಪ್ರಕರಣಗಳು ಮತ್ತು ಆಡಳಿತ ಹಿತದೃಷ್ಟಿಯಿಂದ ವರ್ಗಾವಣೆ ಮಾಡುವ ಪ್ರಕರಣಗಳನ್ನು ಹೊರತುಪಡಿಸಿ, ಉಳಿದಂತೆ ಕೆಲಸ ನಿರ್ವಹಿಸುತ್ತಿರುವ ಬೇರೊಬ್ಬ ಶಿಕ್ಷಕರ ಸ್ಥಾನಕ್ಕೆ ವರ್ಗಾವಣೆ ಮಾಡುವಂತಿಲ್ಲ.

2.9 ಹೆಚ್ಚುವರಿ ಖಾಲಿ ಹುದ್ದೆಗಳನ್ನಾಗಲಿ ಅಥವಾ ಹೆಚ್ಚುವರಿ ಶಿಕ್ಷಕರನ್ನಾಗಲಿ ಹುದ್ದೆ ಸಮೇತವಾಗಿ ಸರ್ಕಾರದ ಅಥವಾ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೇ ಸ್ಥಳಾಂತರಿಸಬಾರದು.

2.10 ಕೌನ್ಸಿಲಿಂಗ್ ಮೂಲಕ ಕೋರಿಕೆ ವರ್ಗಾವಣೆಗಳ ತತ್ಪರಿಣಾಮವಾಗಿ ಉದ್ಭವವಾಗುವ ಖಾಲಿ ಹುದ್ದೆಗಳನ್ನು ಪುನ: ತುಂಬತಕ್ಕದ್ದಲ್ಲ.

2.11 ಅರೆ ಕಾಲಿಕ ಶಿಕ್ಷಕರು ಮತ್ತು ಪ್ರಾಥಮಿಕ ಶಾಲೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಪೂರ್ವ ಪ್ರಾಥಮಿಕ ಶಾಲಾ ಶಿಕ್ಷಕರನ್ನು ವರ್ಗಾವಣೆಗೆ ಪರಿಗಣಿಸಬಾರದು.

2.12 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹೊರಡಿಸಿರುವ ಅಧಿಕೃತ ಜ್ಞಾಪನ ಸಂಖ್ಯೆ: ಸಿ.ಆ.ಸು.ಇ 111 ಸೇನೆವಿ 2005 ದಿನಾಂಕ:29.8.05ರಲ್ಲಿ ತಿಳಿಸಿರುವಂತೆ ಪ್ರಥಮ ಬಾರಿಗೆ ನೇಮಕವಾಗಿರುವ ಸ್ಥಳದಲ್ಲಿ 5 ವರ್ಷಗಳ ಸೇವೆಯನ್ನು ಪೂರೈಸದ ಶಿಕ್ಷಕರನ್ನು ವರ್ಗಾವಣೆಗೆ ಪರಿಗಣಿಸುವಂತಿಲ್ಲ. ಅದನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

2.13 ಚುನಾಯಿತ ಕರ್ನಾಟಕ ಸರ್ಕಾರಿ ನೌಕರರ ಸಂಘದ ಪದಾಧಿಕಾರಿಗಳಾಗಿದ್ದಲ್ಲಿ ಅವರ ವರ್ಗಾವಣೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಡಿ.ಪಿ.ಎ.ಅರ್ 4 ಎಸ್‌ಟಿಆರ್ 2001 ದಿನಾಂಕ: 22.11.2001ರಲ್ಲಿ ತಿಳಿಸಿರುವಂತೆ ಕ್ರಮಕೈಗೊಳ್ಳುವುದು.

2.14 ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ, ರಾಜ್ಯ ಮಟ್ಟದ ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ(ರಿ) ಬೆಂಗಳೂರು ರವರ ಕ್ಷೇತ್ರ ಮಟ್ಟದ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಖಜಾಂಚಿ ಹಾಗೂ ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಸಹಕಾರ್ಯದರ್ಶಿಗಳು, ಸಂಘಟನಾ ಕಾರ್ಯದರ್ಶಿಗಳು, ಖಜಾಂಚಿ ಇವರುಗಳನ್ನು ಸರ್ಕಾರದ ಆದೇಶ ಸಂಖ್ಯೆ: ಡಿ.ಪಿ.ಎ.ಅರ್ 4 ಎಸ್‌ಟಿಆರ್ 2001, ದಿನಾಂಕ: 22.11.2001ರ ಕಂಡಿಕೆ 6(3)ರ ಸೌಲಭ್ಯ ನೀಡಬಹುದು. ಆದರೆ ಒಬ್ಬರು, ಎರಡೂ ಸಂಘಗಳನ್ನೂ ಸೇರಿ, ಸತತವಾಗಿ ಎರಡು ಬಾರಿಗಿಂತ ಹೆಚ್ಚು ಅವಧಿಗೆ ಈ ಸೌಲಭ್ಯ ಪಡೆಯುವಂತಿಲ್ಲ.

**3. ಪೂರ್ವಸಿದ್ಧತಾ ಹಂತ:–**

**3.1 ಎಲ್ಲಾ ಸರ್ಕಾರಿ ಶಾಲೆಗಳನ್ನು ಎ. ಬಿ. ಸಿ ಮತ್ತು ಡಿ ವರ್ಗಗಳಾಗಿ ವರ್ಗೀಕರಣಗೊಳಿಸುವುದು.**

ಪ್ರತಿ ಶೈಕ್ಷಣಿಕ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳು ತಮ್ಮ ಕ್ಷೇತ್ರದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಎ. ಬಿ. ಸಿ (ಎಲ್ಲಾ ಗ್ರಾಮಾಂತರ ಪ್ರದೇಶ)ಮತ್ತು ಡಿ ವರ್ಗ(ನಗರ ಪ್ರದೇಶ)ಗಳಾಗಿ ಕೆಳಗಿನ ವರ್ಗೀಕರಣದ ಮಾನದಂಡದ (ಕಲಂ 3) ಆಧಾರದ ಮೇಲೆ ವರ್ಗೀಕರಿಸಿಕೊಳ್ಳತಕ್ಕದ್ದು. ಪ್ರತಿ ವರ್ಗದ ಶಾಲೆಯಲ್ಲಿ ಕೆಲಸ ನಿರ್ವಹಿಸಿದ ಪ್ರತಿ ವರ್ಷದ ಪೂರ್ಣ ಸೇವೆಗೆ ನಿಗದಿಪಡಿಸಿದ ಕೃಪಾಂಕಗಳನ್ನು ಕಲಂ (4) ರಲ್ಲಿ ತೋರಿಸಲಾಗಿದೆ. ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಕೆಲಸ ಮಾಡುವ ಶಿಕ್ಷಕರಿಗೆ ಪ್ರೋತ್ಸಾಹ ಮತ್ತು ಕೌನ್ಸಿಲಿಂಗ್‌ನಲ್ಲಿ ಆದ್ಯತೆ ನೀಡುವ ಉದ್ದೇಶದಿಂದ ಈ ರೀತಿ ಕೃಪಾಂಕ ನೀಡುವ ಪದ್ಧತಿಯನ್ನು ಜಾರಿಗೆ ತರಲಾಗುತ್ತಿದೆ.

| ಕ್ಷೇತ್ರ | ಶಾಲೆಯ ವರ್ಗ | ವರ್ಗೀಕರಣದ ಮಾನದಂಡ | ಪ್ರತಿ ವರ್ಷದ ಪೂರ್ಣ ಸೇವೆಗೆ ನಿಗದಿಪಡಿಸಿದ ಪ್ರಾದೇಶಿಕ ಕೃಪಾಂಕಗಳು (weightage) |
|---|---|---|---|
| (1) | (2) | (3) | (4) |
| ಗ್ರಾಮಾಂತರ ಪ್ರದೇಶ | ಎ ವರ್ಗ | ರಾಷ್ಟ್ರೀಯ ಹೆದ್ದಾರಿ (ಎನ್.ಹೆಚ್), ರಾಜ್ಯ ಹೆದ್ದಾರಿ (ಎಸ್.ಹೆಚ್) ಅಥವಾ ಪ್ರಮುಖ ಜಿಲ್ಲಾ ರಸ್ತೆ (ಎಂ.ಡಿ.ಆರ್) ರಸ್ತೆಗಳ ಹೊರತಾದ, ರಸ್ತೆಗಳಲ್ಲಿದ್ದು, ಹಳ್ಳಿಯಿಂದ ಕನಿಷ್ಠ 2 ಕಿ.ಮೀ ಒಳಗೇ ಬಸ್ ಸೌಲಭ್ಯವಿಲ್ಲದಿರುವ ಶಾಲೆಗಳು | 2.00 |
| | ಬಿ ವರ್ಗ | ಎನ್.ಹೆಚ್. ಎಸ್.ಹೆಚ್. ಎಮ್.ಡಿ.ಆರ್. ರಸ್ತೆಗಳ ಹೊರತಾದ ಇತರೆ ರಸ್ತೆಗಳ ಪಕ್ಕದಲ್ಲಿದ್ದು, 2 ಕಿ.ಮೀ ಒಳಗೇ ಬಸ್ ಸೌಲಭ್ಯವಿಲ್ಲದಿರುವ ಶಾಲೆಗಳು | 1.75 |
| | ಸಿ. ವರ್ಗ | ಎನ್.ಹೆಚ್., ಎಸ್.ಹೆಚ್. ಎಂ.ಡಿ.ಆರ್ ರಸ್ತೆಗಳಿಂದ 2 ಕಿ.ಮೀ ಒಳಗೆ ಇರುವಂತಹ ಶಾಲೆಗಳು | 1.25 |
| ನಗರ ಪ್ರದೇಶ | ಡಿ. ವರ್ಗ | ನಗರ ಪ್ರದೇಶಗಳಿಂದ 5 ಕಿ.ಮೀ ಒಳಗೆ (ಜಿಲ್ಲೆ ಮತ್ತು ರಾಜ್ಯ ಕೇಂದ್ರಗಳಲ್ಲದೆ) ಅಥವಾ ಜಿಲ್ಲಾ ಕೇಂದ್ರಗಳಿಂದ 10 ಕಿ.ಮೀ ಮತ್ತು ಬೆಂಗಳೂರು ನಗರದಿಂದ 20 ಕಿ.ಮೀ ಒಳಗಿರುವ ಶಾಲೆಗಳು | 1.00 |

3.2 **ವಿವರಣೆ:**

(ಎ) ಬಸ್ ಸೌಲಭ್ಯವಿರುವ ಹಳ್ಳಿ ಎಂದರೆ, ಬಸ್ ಮಾರ್ಗದಿಂದ 2 ಕಿ.ಮೀ ಒಳಗಿರುವ ಯಾವುದೇ ಹಳ್ಳಿ.

(ಬಿ) ನಗರ ಪ್ರದೇಶವೆಂದರೆ ಬೆಂಗಳೂರಿನಿಂದ 20 ಕಿ.ಮೀ ಪರಿಧಿಯೊಳಗಿನ ನಗರ ಪ್ರದೇಶ ಮತ್ತು ವಸತಿ ಪ್ರದೇಶಗಳು, ಅಥವಾ ಜಿಲ್ಲಾ ಕೇಂದ್ರಗಳಿಂದ 10 ಕಿ.ಮೀ ಪರಿಧಿಯೊಳಗಿನ ಪ್ರದೇಶಗಳು ಅಥವಾ ತಾಲ್ಲೂಕು ಕೇಂದ್ರಗಳು ಹಾಗೂ ಇತರೆ ನಗರಗಳಿಂದ 5 ಕಿ.ಮೀ ಪರಿಧಿಯೊಳಗಿನ ಪ್ರದೇಶಗಳು.

3.3 ಮೇಲಿನಂತೆ ವರ್ಗೀಕರಣ ಮಾಡಿದ ನಂತರ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಸಮೂಹ ಸಂಪನ್ಮೂಲ ಕೇಂದ್ರಗಳು, ಕ್ಷೇತ್ರ ಸಂಪನ್ಮೂಲ ಕೇಂದ್ರಗಳ ಪ್ರಕಟಣಾ ಫಲಕಗಳಲ್ಲಿ ತಾತ್ಕಾಲಿಕ ವರ್ಗೀಕರಣ ತಃಖ್ತೆಯನ್ನು ಆಕ್ಷೇಪಣೆ ಅಥವಾ ಸಲಹೆಗಳಿದ್ದಲ್ಲಿ ತಿಳಿಸುವಂತೆ ಸೂಚಿಸಿ ಪ್ರಕಟಿಸುವುದು. ಆಕ್ಷೇಪಣೆಗಳು / ಸಲಹೆಗಳನ್ನು ನೀಡಲು 15 ದಿನಗಳ ಕಾಲಾವಧಿಯನ್ನು ನೀಡುವುದು.

3.4 ಸ್ವೀಕರಿಸಿದ ಆಕ್ಷೇಪಣೆಗಳು / ಸಲಹೆಗಳನ್ನು ಪರಿಗಣಿಸಿ, ತಾತ್ಕಾಲಿಕ ವರ್ಗೀಕರಣ ಪಟ್ಟಿಯಲ್ಲಿ ಯಾವುದೇ ತಪ್ಪು / ಸೇರ್ಪಡೆ ಇದ್ದಲ್ಲಿ, ಸರಿಪಡಿಸಿದ ನಂತರ ಅಂತಿಮ ವರ್ಗೀಕರಣ ಪಟ್ಟಿಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಮೂಹ ಸಂಪನ್ಮೂಲ ಕೇಂದ್ರಗಳು, ಕ್ಷೇತ್ರ ಸಂಪನ್ಮೂಲ ಕೇಂದ್ರಗಳ ಪ್ರಕಟಣಾ ಫಲಕಗಳಲ್ಲಿ ಶಿಕ್ಷಕರ ಮಾಹಿತಿಗಾಗಿ ಪ್ರಕಟಿಸುವುದು.

3.5 **ವರ್ಗವಾರು ಕೃಪಾಂಕ (Weightage) ಆಧಾರದಲ್ಲಿ ಆದ್ಯತಾಪಟ್ಟಿ ಸಿದ್ಧಮಾಡುವುದು.**

ಕಂಡಿಕೆ 3.1 ರ ಪಟ್ಟಿಯಲ್ಲಿ ನೀಡಲಾದಂತೆ ವರ್ಗವಾರು ಕೃಪಾಂಕಗಳನ್ವಯ (Weightage) ಆದ್ಯತಾ ಪಟ್ಟಿಯನ್ನು ಸಿದ್ದಮಾಡಲು, ಈಗಿನ ಕಾರ್ಯನಿರ್ವಹಿಸುವ ಸ್ಥಳವನ್ನು ಮೊದಲು ಮೇಲೆ ಹೇಳಿದ ವಿವರಣೆಯನ್ನನುಸರಿಸಿ, ಎ. ಬಿ. ಸಿ ಅಥವಾ ಡಿ ವರ್ಗಗಳಾಗಿ ವರ್ಗೀಕರಣ ಮಾಡಿಕೊಳ್ಳಬೇಕು. ನಂತರ ಈಗ ಕಾರ್ಯನಿರ್ವಹಿಸುವ ಸ್ಥಳದಲ್ಲಿ ಶಿಕ್ಷಕರು ಸೇವೆ ಸಲ್ಲಿಸಿದ ವರ್ಷಗಳನ್ನು ಆ ವರ್ಗಕ್ಕೆ ನೀಡಲಾದ ಕೃಪಾಂಕಗಳಿಂದ (Weightage) ಗುಣಿಸಿ, ಗುಣಿತ ಸೇವೆಯ ಪ್ರಮಾಣವನ್ನು (weighted Service) ಪಡೆಯಬೇಕು. ಗುಣಿತ ಸೇವೆಯ ಪ್ರಮಾಣವನ್ನಾಧರಿಸಿ ಆದ್ಯತಾ ಪಟ್ಟಿಯನ್ನು ಸಿದ್ಧಪಡಿಸಬೇಕು.

**ಉದಾಹರಣೆ:**

| ಎ ವರ್ಗದ ಶಾಲೆಗಳು | | | ಬಿ ವರ್ಗದ ಶಾಲೆಗಳು | | | ಸಿ ವರ್ಗದ ಶಾಲೆಗಳು | | | ಡಿ ವರ್ಗದ ಶಾಲೆಗಳು | | |
|---|---|---|---|---|---|---|---|---|---|---|---|
| ಸೇವೆ ಸಲ್ಲಿಸಿದ ವರ್ಷಗಳು | ಕೃಪಾಂಕ | ಗುಣಿತ ಸೇವೆ ಪ್ರಮಾಣ | ಸೇವೆ ಸಲ್ಲಿಸಿದ ವರ್ಷಗಳು | ಕೃಪಾಂಕ | ಗುಣಿತ ಸೇವೆ ಪ್ರಮಾಣ | ಸೇವೆ ಸಲ್ಲಿಸಿದ ವರ್ಷಗಳು | ಕೃಪಾಂಕ | ಗುಣಿತ ಸೇವೆ ಪ್ರಮಾಣ | ಸೇವೆ ಸಲ್ಲಿಸಿದ ವರ್ಷಗಳು | ಕೃಪಾಂಕ | ಗುಣಿತ ಸೇವೆ ಪ್ರಮಾಣ |
| 8 | 2 | 16 | 8 | 1.75 | 14.00 | 8 | 1.25 | 12.00 | 8 | 1.00 | 8 |

3.6 ❖ ಕ್ಯಾನ್ಸರ್, ಕಿಡ್ನಿ ವೈಫಲ್ಯ, ಹೃದಯ ಶಸ್ತ್ರ ಚಿಕಿತ್ಸೆ, ಈ ಖಾಯಿಲೆಗಳಿಂದ ಬರುವ ಪ್ರಕರಣಗಳು. (ಸಂಬಂಧಿಸಿದ ಆಸ್ಪತ್ರೆಗಳ ವೈದ್ಯರು ಅಥವಾ ಜಿಲ್ಲಾ ವೈದ್ಯಾಧಿಕಾರಿಗಳ ದೃಢೀಕರಣ ಪತ್ರ ಅಗತ್ಯ)

3.7 ❖ ಶೇಕಡ 40ಕ್ಕಿಂತ ಹೆಚ್ಚಾಗಿಲತೆಯನ್ನು ಹೊಂದಿರುವ ಅಂಗವಿಕಲರ ಪ್ರಕರಣಗಳು.

3.8 ಅಂಗವಿಕಲರು ನೀಡಿರುವ ಪ್ರಮಾಣ ಪತ್ರಗಳನ್ನು ಪರಿಶೀಲಿಸಲು ಜಿಲ್ಲಾ ವೈದ್ಯಾಧಿಕಾರಿಗಳು ನಿಯೋಜಿಸಿರುವ ಒಬ್ಬ ಹಿರಿಯ ತಜ್ಞ ವೈದ್ಯರು ಕೌನ್ಸಿಲಿಂಗ್ ಅವಧಿಯಲ್ಲಿ ಹಾಜರಿರಬೇಕು. ಅನುಮಾನಾಸ್ಪದ ಪ್ರಕರಣಗಳನ್ನು ಜಿಲ್ಲಾ ವೈದ್ಯಾಧಿಕಾರಿಗಳಿಗೆ ರೆಫರ್ ಮಾಡಬೇಕು. ಈ ವಿಷಯದಲ್ಲಿ ಜಿಲ್ಲಾ ವೈದ್ಯಾಧಿಕಾರಿಗಳ ತೀರ್ಮಾನ ಅಂತಿಮವಾಗಿರುತ್ತದೆ.

3.9 ಪತಿ–ಪತ್ನಿ ಪ್ರಕರಣಗಳಲ್ಲಿ ಕೆಳಗಿನ ಆದ್ಯತಾನುಸಾರ

1.ಪತಿ–ಪತ್ನಿಯರಿಬ್ಬರೂ ಸರ್ಕಾರಿ ನೌಕರಿಯಲ್ಲಿರುವ ಪ್ರಕರಣಗಳು

2.ಪತಿ ಅಥವಾ ಪತ್ನಿ ಒಬ್ಬರು ರಾಜ್ಯ ಸರ್ಕಾರದ ಸೇವೆಯಲ್ಲಿ ಇಲ್ಲದ ಪ್ರಕರಣಗಳು

3.ಇತರೆ ಪ್ರಕರಣಗಳು

3.10 ಪ್ರತಿ ಗುಂಪಿನಲ್ಲಿ ಸೇವೆಗೆ ಅನುಗುಣವಾಗಿ ಆದ್ಯತಾ ಪಟ್ಟಿಯನ್ನು ತಯಾರಿಸತಕ್ಕದ್ದು.

ಎ. ವರ್ಗದ ಶಾಲೆಯಲ್ಲಿ ಸೇವೆ ಸಲ್ಲಿಸಿದ ಶಿಕ್ಷಕ

ಗುಣಿತ ಸೇವಾ ಪ್ರಮಾಣ ಶಾಲೆಯಲ್ಲಿ ಸೇವೆ ಸಲ್ಲಿಸಿದ ಅವಧಿX2

ಬಿ. ಬಿ ವರ್ಗದ ಶಾಲೆಗಳಿಗೆ ಗುಣಿತ ಸೇವೆ ಪ್ರಮಾಣ ಶಾಲೆಯಲ್ಲಿ ಸೇವೆ ಸಲ್ಲಿಸಿದ ಅವಧಿ X1.75

ಅದೇ ರೀತಿ "ಸಿ" ವರ್ಗದ ಶಾಲೆಗೆ ಸಂಬಂಧಿಸಿದಂತೆ ಸೇವೆ ಸಲ್ಲಿಸಿದ ಅವಧಿ X1.25 ಮತ್ತು "ಡಿ" ವರ್ಗದ ಶಾಲೆಯಲ್ಲಿ ಸೇವೆ ಸಲ್ಲಿಸಿದವರಿಗೆ ಸೇವಾ ಅವಧಿ X1 ಪ್ರಕಾರ ಗುಣಿತ ಸೇವಾ ಪ್ರಮಾಣವನ್ನು ಪರಿಗಣಿಸುವುದು.

3.11 ಕನಿಷ್ಠ 5 ವರ್ಷ ಸೇವೆ ಸಲ್ಲಿಸದೆ ಇರುವ ಶಿಕ್ಷಕರ ವರ್ಗಾವಣೆ ಮಾಡತಕ್ಕದ್ದಲ್ಲ. ಸೇವಾ ಅವಧಿಯನ್ನು ಲೆಕ್ಕಾಚಾರ ಮಾಡುವಾಗ ಶಿಕ್ಷಕರು ಒಂದು ಪ್ರದೇಶದಲ್ಲಿ ಒಟ್ಟು ಸಲ್ಲಿಸಿದ ಸೇವಾ ಅವಧಿಯನ್ನು ಮಾತ್ರ ಪರಿಗಣಿಸತಕ್ಕದ್ದು. ಶಾಲೆಯ ಅಥವಾ ಹುದ್ದೆಯಲ್ಲಿ ಕೆಲಸ ಮಾಡಿದ ಅವಧಿಯನ್ನು ಪರಿಗಣಿಸಲು ಬರುವುದಿಲ್ಲ. ಹೆಚ್ಚು ಗುಣಿತ ಸೇವೆ ಪ್ರಮಾಣವಿರುವ ಶಿಕ್ಷಕರನ್ನು ಕಡಿಮೆ ಗುಣಿತ ಸೇವೆ ಪ್ರಮಾಣ ಇರುವ ಶಿಕ್ಷಕರ ಪಟ್ಟಿಯನ್ನು ಮೇಲೆ ಬರುವಂತೆ ಆದ್ಯತಾ ಪಟ್ಟಿಯನ್ನು ತಯಾರಿಸುವುದು.

3.12 ಪ್ರತಿ ಪಟ್ಟಿಯಲ್ಲಿಯೂ ಪುರುಷ ಶಿಕ್ಷಕರಿಗಿಂತ ಮೊದಲು ಮಹಿಳಾ ಶಿಕ್ಷಕರಿಗೆ ಆದ್ಯತೆ ನೀಡುವುದು.

3.13 ಮೇಲೆ ವಿವರಿಸಿದ ರೀತಿ ಉಪನಿರ್ದೇಶಕರು ತಾತ್ಕಾಲಿಕ ಆದ್ಯತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸತಕ್ಕದ್ದು ಹಾಗೂ ಆಕ್ಷೇಪಣೆ ಸಲ್ಲಿಸಲು 10 ದಿನಗಳ ಕಾಲಾವಕಾಶ ನೀಡತಕ್ಕದ್ದು. ಶಿಕ್ಷಕರಿಂದ ಬರುವ ಆಕ್ಷೇಪಣೆಗಳನ್ನು ಸ್ವೀಕರಿಸಿ, ಪರಾಮರ್ಶಿಸಿ ಅವುಗಳನ್ನು ಅರ್ಹತೆಗೆ ಅನುಗುಣವಾಗಿ ಪರಿಗಣಿಸತಕ್ಕದ್ದು ಅಥವಾ ತಿರಸ್ಕರಿಸುವುದು. ಅಂತಹ ತೀರ್ಮಾನದ ಆಧಾರದ ಮೇಲೆ ಕೌನ್ಸಿಲಿಂಗ್‌ಗಾಗಿ ಶಿಕ್ಷಕರ ಅಂತಿಮ ಆದ್ಯತಾ ಪಟ್ಟಿಯನ್ನು ಪ್ರಕಟಿಸತಕ್ಕದ್ದು.

**4. ಕೌನ್ಸಿಲಿಂಗ್ ಮೂಲಕ ಹೊಸದಾಗಿ ಆಯ್ಕೆಯಾದ ಶಿಕ್ಷಕರನ್ನು ನೇಮಕಾತಿ ಮಾಡುವುದು.**

4.1 ಹೊಸದಾಗಿ ಆಯ್ಕೆಯಾದ ಶಿಕ್ಷಕರನ್ನು ಎ ಮತ್ತು ಬಿ. ವರ್ಗದ ಶಾಲೆಗಳಿಗೆ ಮಾತ್ರ ಕೌನ್ಸಿಲಿಂಗ್ ಮೂಲಕ ನೇಮಕಾತಿ ಮಾಡಬೇಕು.

4.2 ಏಕೋಪಾಧ್ಯಾಯ ಅಥವಾ ಇಬ್ಬರು ಶಿಕ್ಷಕರ ಶಾಲೆಗಳಲ್ಲಿನ ಖಾಲಿ ಹುದ್ದೆಗಳನ್ನು ಕೌನ್ಸಿಲಿಂಗ್‌ನಲ್ಲಿ ಮೊದಲು ಭರ್ತಿ ಮಾಡತಕ್ಕದ್ದು.

**5. ಅಪವಾದಗಳು (exceptions):**

(ಅ) ಪೂರ್ಣವಾಗಿ ನಗರ ಪ್ರದೇಶಗಳಾದ ಶೈಕ್ಷಣಿಕ ಕ್ಷೇತ್ರಗಳಲ್ಲಿ ಎಲ್ಲಾ ಶಾಲೆಗಳು ಸಿ ಮತ್ತು ಡಿ ವರ್ಗಕ್ಕೆ ಸೇರಿದ್ದರೆ ಸಿ ಮತ್ತು ಡಿ. ವರ್ಗದ ಶಾಲೆಗಳಿಗೆ ಸ್ಥಳ ನಿಯುಕ್ತಿ ಮಾಡಬಹುದು.

(ಆ) ಆಯ್ಕೆಯಾದ ದೃಢೀಕರಿಸಿದ ಅಂಗವಿಕಲ ಅಭ್ಯರ್ಥಿಗಳನ್ನು ಅವರ ಆಯ್ಕೆಯಂತೆ ಸಿ ಮತ್ತು ಡಿ ವರ್ಗ ಶಾಲೆಗಳೂ ಸೇರಿದಂತೆ ಅವರ ಆಯ್ಕೆಯ ಸ್ಥಳಕ್ಕೆ ಸ್ಥಳ ನಿಯುಕ್ತಿ ಮಾಡುವುದು.

**6. ಕೌನ್ಸಿಲಿಂಗ್ ಮೂಲಕ ವರ್ಗಾವಣೆಗೆ ವೇಳಾ ಪಟ್ಟಿಯನ್ನು ಗೊತ್ತುಪಡಿಸುವುದು**

6.1 ಆಡಳಿತಾತ್ಮಕ ವರ್ಗಾವಣೆಗಳಿಗೆ ಕೋರಿಕೆ:–

ವರ್ಗಾವಣೆಗಳಿಗೆ ಘಟಕದೊಳಗಿನ, ಹಾಗೂ ಅಂತರ ಘಟಕ ಮರುಹಂಚಿಕೆ (redeployment), ವೇಳಾ ಪಟ್ಟಿಯನ್ನು ಈ ಕೆಳಕಂಡಂತೆ ಗೊತ್ತುಪಡಿಸಬೇಕು.

- ಪೂರ್ವಸಿದ್ಧತೆಯಾಗಿ ಎಲ್ಲಾ ಶಾಲೆಗಳನ್ನು ಎ. ಬಿ. ಸಿ ಮತ್ತು ಡಿ ವರ್ಗಗಳಾಗಿ ವರ್ಗೀಕರಿಸುವುದು.
- ಮೊದಲನೆಯದಾಗಿ ಹೆಚ್ಚುವರಿ ಶಿಕ್ಷಕರನ್ನು ಅಗತ್ಯವಿರುವ ಶಾಲೆಗಳಿಗೆ ಮರುಹಂಚಿಕೆ ವೇಳಾಪಟ್ಟಿಯಂತೆ ಮಾಡುವುದು.
- ಎರಡನೆಯದಾಗಿ ಕಡ್ಡಾಯ ಗ್ರಾಮಾಂತರ ಸೇವೆ ಸಲ್ಲಿಸಿರದ ಶಿಕ್ಷಕರನ್ನು ಕೌನ್ಸಿಲಿಂಗ್ ಮೂಲಕ ವರ್ಗಾಯಿಸುವುದು.
- ಮೂರನೆಯದಾಗಿ ದೂರು ಪ್ರಕರಣಗಳ ವರ್ಗಾವಣೆಗಳು.
- ನಾಲ್ಕನೆಯದಾಗಿ ಕೋರಿಕೆ ವರ್ಗಾವಣೆಗಳು ಜಿಲ್ಲೆಯೊಳಗೆ ಘಟಕದೊಳಗೆ ಕೌನ್ಸಿಲಿಂಗ್ ಮೂಲಕ ಮಾಡುವುದು.
- ಐದನೆಯದಾಗಿ ಕೋರಿಕೆ ವರ್ಗಾವಣೆಗಳು ಘಟಕದ ಹೊರಗಿನ ಸ್ಥಳಗಳಿಗೆ ಕೌನ್ಸಿಲಿಂಗ್ ಮೂಲಕ ಮಾಡುವುದು.
- ಆರನೆಯದಾಗಿ ಕೋರಿಕೆ ವರ್ಗಾವಣೆಗಾಗಿ ಶಿಕ್ಷಕರಿಂದ ಅರ್ಜಿಗಳನ್ನು ಕರೆಯಲು ಪ್ರಕಟಣೆಯ ದಿನಾಂಕ ನಿಗಧಿಪಡಿಸುವುದು.
- ಕೇಂದ್ರ ದಾಖಲಾತಿ ಘಟಕದಿಂದ ಜಿಲ್ಲೆಗಳಿಗೆ ಅಗತ್ಯವಿರುವ ತಂತ್ರಾಂಶ (Software) ಗಳನ್ನು ಒದಗಿಸುವುದು ಹಾಗೂ ಪೂರ್ವಭಾವೀ ತರಬೇತಿಗಾಗಿ ಜಿಲ್ಲೆಗಳ ನೋಡಲ್ ಅಧಿಕಾರಿಗಳ ಹಾಗೂ ಸಿಬ್ಬಂದಿ ಸಭೆ ನಡೆಸುವುದು.
- ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಅರ್ಜಿ ಸಲ್ಲಿಸಲು ಅಂತಿಮ ದಿನಾಂಕ.
- ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಅರ್ಜಿಗಳ ಪರಿಶೀಲನೆ ಮತ್ತು ದೃಢೀಕರಣ.
- ತಾತ್ಕಾಲಿಕ ಆದ್ಯತಾ ಪಟ್ಟಿ ಮತ್ತು ಖಾಲಿ ಹುದ್ದೆಗಳ ಪ್ರಕಟಣೆ
- ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕ.
- ಅಂತಿಮ ಆದ್ಯತಾ ಪಟ್ಟಿಗಳ ಪ್ರಕಟಣೆ
- ಜಿಲ್ಲಾ ಮಟ್ಟದಲ್ಲಿ ಕೌನ್ಸ್‌ಲಿಂಗ್
- ವಿಭಾಗೀಯ ಮಟ್ಟದಲ್ಲಿ ಕೌನ್ಸಿಲಿಂಗ್.
- ರಾಜ್ಯ ಮಟ್ಟದಲ್ಲಿ ಕೌನ್ಸ್‌ಲಿಂಗ್

**7. ಕೌನ್ಸಿಲಿಂಗ್ ಮೂಲಕ ಮರು ಹಂಚಿಕೆ ಹಾಗೂ ವರ್ಗಾವಣೆಗಳನ್ನು ಮಾಡುವುದು.**

**7.1 ಹಂತ–1**

**ಹೆಚ್ಚುವರಿ ಶಿಕ್ಷಕರ ಮರುಹಂಚಿಕೆ**

ಹೆಚ್ಚುವರಿ ಶಿಕ್ಷಕರಿರುವ ಶಾಲೆಗಳಿಂದ ಅಗತ್ಯವಿರುವ ಶಾಲೆಗಳಿಗೆ ಹೆಚ್ಚುವರಿ ಶಿಕ್ಷಕರನ್ನು ಹುದ್ದೆ ಸಹಿತ ಸರ್ಕಾರದ ಪೂರ್ವಾನುಮತಿ ಪಡೆದು ಮರುಹಂಚಿಕೆ ಮಾಡುವುದು. ಸರ್ಕಾರದ ಪೂರ್ವಾನುಮತಿ ಈ ಬಗ್ಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಪತ್ರ: ಸಿ3(7) ಪ್ರಾ.ಶಿ.ಹು.ಸ್ಥ 3/2001–02 ದಿನಾಂಕ: 21.6.2001 ಮತ್ತು ನಂತರದ ಮಾರ್ಪಾಡು ಆದೇಶವನ್ನು ಕಟ್ಟುನಿಟ್ಟಾಗಿ ಪಾಲಿಸುವುದು.

**7.2 ಹಂತ:2**

**ಕಡ್ಡಾಯ ಗ್ರಾಮಾಂತರ ಸೇವೆ**

ಈ ಕೌನ್ಸಿಲಿಂಗ್‌ನಲ್ಲಿ ಗ್ರಾಮೀಣ ಪ್ರದೇಶದ ಶಾಲೆಗಳಿಗೆ ಬೇಕಾದ ಶಿಕ್ಷಕರ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಕೆಳಕಂಡಂತೆ ಮಾಡುವುದು.

7.3 ಎಲ್ಲಾ ಶಿಕ್ಷಕರೂ ಗ್ರಾಮಾಂತರ ಪ್ರದೇಶಗಳಲ್ಲಿ ಅಂದರೆ, ಎ, ಬಿ ಮತ್ತು ಸಿ ವರ್ಗದ ಶಾಲೆಗಳಲ್ಲಿ 5 ವರ್ಷ ಕಡ್ಡಾಯವಾಗಿ ಸೇವೆ ಸಲ್ಲಿಸಿರಬೇಕು.

7.4 ಒಟ್ಟಿಗೆ 15 ವರ್ಷಗಳ ಕಾಲ ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸಿದ ಆದರೆ 5 ವರ್ಷಗಳ ಕಡ್ಡಾಯ ಗ್ರಾಮಾಂತರ ಸೇವೆಯನ್ನು ಸಲ್ಲಿಸಿರದ ಶಿಕ್ಷಕರನ್ನು ವೃಂದ ಬಲದ ಶೇ.2ಕ್ಕೆ ಮೀರದಂತೆ ಸೀಮಿತಗೊಳಿಸಿ ಆಡಳಿತಾತ್ಮಕವಾಗಿ ನಗರ ಪ್ರದೇಶದ ಹೊರಗಿನ ಗ್ರಾಮೀಣ ಶಾಲೆಗಳಿಗೆ ಕೌನ್ಸಿಲಿಂಗ್ ಮೂಲಕ ವರ್ಗಾಯಿಸಬೇಕು.

7.5 ಈ ಉದ್ದೇಶಕ್ಕಾಗಿ ಅಗತ್ಯವಿದ್ದಲ್ಲಿ ಶಿಕ್ಷಕರನ್ನು ಅವರ ಜೇಷ್ಠತಾ ಘಟಕದ ಹೊರಗೆ ಬೇರೆ ಜೇಷ್ಠತಾ ಘಟಕಕ್ಕೆ ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16–A ರಡಿ ಇಲಾಖಾ ಮುಖ್ಯಸ್ಥರು ವರ್ಗಾಯಿಸಬಹುದು.

7.6 ಅಂತಹ ಶಿಕ್ಷಕರು ಕೆಳಕಂಡ ನಿಬಂಧನೆಗಳನ್ನು ಪೂರೈಸಿರುವ ಬಗ್ಗೆ ಮೊದಲು ಖಾತ್ರಿಪಡಿಸಿಕೊಳ್ಳತಕ್ಕದ್ದು.

(ಅ) 50 ವರ್ಷ ವಯೋಮಿತಿಯೊಳಗೆ ಇರುವುದನ್ನು

(ಆ) ಕನಿಷ್ಠ 5 ವರ್ಷ ಸೇವೆಯನ್ನು ಗ್ರಾಮೀಣ ಪ್ರದೇಶದಲ್ಲಿನ ಎ, ಬಿ ಮತ್ತು ಸಿ ವರ್ಗದ ಶಾಲೆಯಲ್ಲಿ ಮಾಡದೆ ಇರುವುದು.

7.7 ಅಂತಹ ಶಿಕ್ಷಕರನ್ನು ಎ, ಬಿ ಅಥವಾ ಸಿ ವರ್ಗದ ಶಾಲೆಗಳಿಗೆ ಕೌನ್ಸಿಲಿಂಗ್ ಮುಖಾಂತರ ವರ್ಗಾವಣೆ ಮಾಡಬಹುದು.

**8. ಕಡ್ಡಾಯ ಗ್ರಾಮಾಂತರ ಸೇವೆ ವರ್ಗಾವಣೆಗಳಿಗೆ ಅಪವಾದಗಳು (exceptioṇ):**

8.1 ದಿನಾಂಕ:22.11.01ರ, ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಬಿಆರ್ 2004ರ ಕಂಡಿಕೆ 6ರಲ್ಲಿನ (1)(2)/(4)(5)ರ ವರ್ಗಗಳ ಶಿಕ್ಷಕರನ್ನು ಕಡ್ಡಾಯ ಗ್ರಾಮೀಣ ಸೇವೆಗಾಗಿ ಆಡಳಿತಾತ್ಮಕ ವರ್ಗಾವಣೆಯಿಂದ ಹೊರತುಪಡಿಸಬಹುದು.

8.2 ಈ ಆದೇಶದ ಯಾವುದೇ ಅಂಶದ ತದ್ವಿರುದ್ಧತೆಗೆ ಅವಕಾಶ ನೀಡದಂತೆ ಮಹಿಳಾ ಸರ್ಕಾರಿ ನೌಕರರು ವಿಧವೆಯಾಗಿದ್ದಲ್ಲಿ ಅವರನ್ನು ಅವರು ಆಯ್ಕೆ ಮಾಡುವ ಖಾಲಿ ಹುದ್ದೆಗೆ ವರ್ಗಾವಣೆ ಮಾಡಬಹುದು ಅಥವಾ ಅವರು ಸ್ಥಳ ನಿಯುಕ್ತಿ ಮಾಡಬಹುದು.

8.3 ಸರ್ಕಾರಿ ನೌಕರರು ಅಂಗವಿಕಲರಾಗಿದ್ದರೆ ವಿನಾಯಿತಿ ನೀಡಬಹುದು.

8.4 ಸರ್ಕಾರಿ ನೌಕರನು/ನೌಕರಳು ಅವನ/ಅವಳ ಪತಿ, ಪತ್ನಿ ಅಥವಾ ಮಕ್ಕಳು ದೀರ್ಘಾವಧಿ ಖಾಯಿಲೆಯಿಂದ (ಕಿಡ್ನಿ, ಕ್ಯಾನ್ಸರ್, ಹೃದಯಕ್ಕೆ ಸಂಬಂಧಿಸಿದ) ನರಳುತ್ತಿದ್ದು ಅವರು ಕಾರ್ಯನಿರ್ವಹಿಸುವ ಸ್ಥಳದಲ್ಲೇ ಅಗತ್ಯ ವೈದ್ಯೋಪಚಾರದ ಸೌಲಭ್ಯ ಇರದಿದ್ದಲ್ಲಿ ಅಂತಹ ವೈದ್ಯೋಪಚಾರ ಲಭ್ಯವಿರುವ ಸ್ಥಳಕ್ಕೆ ಅವರ ವರ್ಗಾವಣೆ ಅವಶ್ಯಕತೆ ಇದ್ದಲ್ಲಿ ಮಾಡಬಹುದು. ಆದರೆ ಸಕ್ಷಮ ವೈದ್ಯಕೀಯ ಮಂಡಳಿಯಿಂದ ಖಾಯಿಲೆಯ ಸ್ವರೂಪ, ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲಿ ವೈದ್ಯೋಪಚಾರದ ಸೌಲಭ್ಯದ ಕೊರತೆ ಬಗ್ಗೆ ದೃಢೀಕರಣದೊಂದಿಗೆ ಅಗತ್ಯ ವೈದ್ಯೋಪಚಾರದ ಸೌಲಭ್ಯವಿರುವ ಸ್ಥಳವನ್ನು ನಿರ್ದಿಷ್ಠ ಪಡಿಸಿದ ದೃಢೀಕರಣ ಪತ್ರವನ್ನು ಸಂಬಂಧಿಸಿದ ಸರ್ಕಾರಿ ನೌಕರರು ಸಲ್ಲಿಸಿದ ನಂತರ ವರ್ಗಾವಣೆ ಮಾಡಬಹುದು.

9. ಹಂತ–3

**9.1 ದೂರಿನ ಮೇಲಿನ ವರ್ಗಾವಣೆಗಳು.**

ದೂರಿನ ಮೇಲೆ ಮಾಡುವ ವರ್ಗಾವಣೆ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಡಿ.ಪಿ.ಎ.ಆರ್ 4 ಎಸ್‌ಟಿ.ಆರ್2001 ದಿನಾಂಕ:22.11.01ರ ಕಂಡಿಕೆ 7ರ (ಎಫ್)ರಂತೆ ಸಾಮಾನ್ಯ ಸೂಚನೆಗಳನ್ನು ಪಾಲಿಸತಕ್ಕದ್ದು.

9.2 ಸರ್ಕಾರಿ ನೌಕರರ ವಿರುದ್ಧ ಯಾವುದೇ ಶಿಸ್ತು ಅಥವಾ ಕ್ರಿಮಿನಲ್ ಮೊಕದ್ದೊಮೆ ಇದ್ದಲ್ಲಿ ನೇಮಕಾತಿ ಪ್ರಾಧಿಕಾರವು ಅಂತಹ ನೌಕರರನ್ನು ಅಮಾನತ್ತುಗೊಳಿಸುವ ಬದಲಿಗೆ ಅವರನ್ನು ವರ್ಗಾವಣೆ ಮಾಡಬಹುದು.

**10 ಕೌನ್ಸಿಲಿಂಗ್ ಮೂಲಕ ವೃಂದದೊಳಗಿನ ಕೋರಿಕೆ ವರ್ಗಾವಣೆ ಬಗ್ಗೆ.**

ಸಾಮಾನ್ಯ ಸೂಚನೆಗಳು – ವೃಂದದೊಳಗಿನ ವರ್ಗಾವಣೆ ಕುರಿತು.

10.1 ಕೌನ್ಸಿಲಿಂಗ್ ಪ್ರಾರಂಭಕ್ಕೆ ಮುನ್ನಾ ವರ್ಗಾವಣೆ ಮಾದರಿ ಅರ್ಜಿಯನ್ನು ಉಪನಿರ್ದೇಶಕರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಗಳಲ್ಲಿನ ಪ್ರಕಟಣಾ ಫಲಕದಲ್ಲಿ ಸಂಬಂಧಿಸಿದವರ ತಿಳುವಳಿಕೆಗೆ ಪ್ರಕಟಿಸತಕ್ಕದ್ದು.

10.2 ಅಪೇಕ್ಷೆಯುಳ್ಳ ಶಿಕ್ಷಕರುಗಳು ನಿಗಧಿತ ವರ್ಗಾವಣೆ ಅರ್ಜಿ ನಮೂನೆಯಲ್ಲಿ ವರ್ಗಾವಣೆಯನ್ನು ಕೋರಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ನಿಗಧಿತ ಅವಧಿಯಲ್ಲಿ ಸಲ್ಲಿಸತಕ್ಕದ್ದು

10.3 ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಸಲ್ಲಿಸಿದ ವರ್ಗಾವಣೆ ಅರ್ಜಿಗಳನ್ನು ಮಾತ್ರ ವರ್ಗಾವಣೆಗೆ ಪರಿಗಣಿಸಲಾಗುವುದು. ಮೇಲಿನ ಹಂತದಲ್ಲಿ ಸ್ವೀಕೃತವಾದ ಶಿಫಾರಸ್ಸು, ಟಿಪ್ಪಣಿಗಳನ್ನು ಅರ್ಜಿಗಳನ್ನು ಆಯಾ ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿಗೆ ರವಾನಿಸತಕ್ಕದ್ದು.

10.4 ಕ್ಷೇತ್ರ ಶಿಕ್ಷಣಾಧಿಕಾರಿಗಳು, ಎಲ್ಲಾ ವರ್ಗಾವಣೆ ಅರ್ಜಿಗಳನ್ನು ಪರಿಶೀಲಿಸಿ ನಿಗಧಿತ ಅವಧಿಯೊಳಗೆ ತಮ್ಮ ಷರಾದೊಂದಿಗೆ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರಿಗೆ ಜಿಲ್ಲೆಯೊಳಗಿನ ವರ್ಗಾವಣೆಗೆ ಸಂಬಂಧಿಸಿದ ಅರ್ಜಿಗಳನ್ನು ಕ್ರೋಢೀಕರಿಸಿ ಸಲ್ಲಿಸುವುದು. ವಿಭಾಗದೊಳಗಿನ ವರ್ಗಾವಣೆಗೆ ಸಂಬಂಧಿಸಿದ ಅರ್ಜಿಗಳನ್ನು ಸಂಬಂಧಿಸಿದ ನಿರ್ದೇಶಕರುಗಳಿಗೆ ಮತ್ತು ಅಂತರ ವಿಭಾಗೀಯ ವರ್ಗಾವಣೆಗಳಿಗೆ ಸಂಬಂಧಿಸಿದ ಅರ್ಜಿಗಳನ್ನು ಕ್ರೋಢೀಕರಿಸಿ ಆಯುಕ್ತರು ಸಾ.ಶಿ.ಇ.ಬೆಂಗಳೂರು ಇವರಿಗೆ ಸಲ್ಲಿಸುವುದು.

10.5 ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಲ್ಲಿಸಿದ ಅರ್ಜಿಗಳ ಆಧಾರದ ಮೇಲೆ ವಿವರಿಸಿದಂತೆ ಆದ್ಯತಾ ಪಟ್ಟಿಯನ್ನು ಜಿಲ್ಲಾ/ತಾಲ್ಲೂಕು ಒಳಗೆ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಉಪನಿರ್ದೇಶಕರು, ವಿಭಾಗದೊಳಗಿನ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ನಿರ್ದೇಶಕರುಗಳು ಮತ್ತು ಅಂತರ ವಿಭಾಗೀಯ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಆಯುಕ್ತರು ಸಾ.ಶಿ.ಇ., ಬೆಂಗಳೂರು ಇವರು ತಯಾರಿಸುವುದು.

**11. ಪರಸ್ಪರ ವರ್ಗಾವಣೆಗಳು:**

11.1 ಮೇಲೆ ತಿಳಿಸಿರುವ ಪ್ರಕರಣಗಳ ಜೊತೆಗೆ ಎಲ್ಲಾ ಅರ್ಹ ಪರಸ್ಪರ ವರ್ಗಾವಣೆಯ ಪ್ರಕರಣಗಳನ್ನು ಮೇಲಿನ ಮಾರ್ಗಸೂಚಿಗಳಂತೆ ಪರಿಗಣಿಸುವುದು.

11.2 ಘಟಕದೊಳಗಿನ ಪರಸ್ಪರ ವರ್ಗಾವಣೆಗಳನ್ನು ಹಂತ–4 ರಲ್ಲಿ ಮಾಡುವುದು. ಘಟಕದ ಹೊರಗಿನ ಪರಸ್ಪರ ವರ್ಗಾವಣೆಗಳನ್ನು ಹಂತ–5 ರಲ್ಲಿ ಮಾಡುವುದು.

11.3 ಎಲ್ಲಾ ಪರಸ್ಪರ ವರ್ಗಾವಣೆಗಳನ್ನು ಇಬ್ಬರೂ ಶಿಕ್ಷಕರ ಒಪ್ಪಿಗೆ ಇದ್ದಲ್ಲಿ ಮಾತ್ರ ಮಾಡತಕ್ಕದ್ದು. ವರ್ಗಾವಣೆ ಆದೇಶಗಳನ್ನು ಜಾರಿ ಮಾಡುವ ಮುನ್ನ ಇದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

**12. ಇತರೇ ಅಂಶಗಳು:–**

12.1 ಎ ವರ್ಗದ ಹಾಗೂ ಏಕೋಪಾಧ್ಯಾಯ ಶಾಲಾ ಶಿಕ್ಷಕರು ಬಿ, ಸಿ ಹಾಗೂ ಡಿ ಶಾಲೆಗಳಿಗೆ ವರ್ಗಾವಣೆಯಾದಾಗ ಅವರ ಸ್ಥಾನಕ್ಕೆ ಬದಲಿ ಶಿಕ್ಷಕರು ಹಾಜರಾಗಿ ಚಾರ್ಜ್ ವಹಿಸಿಕೊಂಡ ನಂತರವೇ ವರ್ಗಾವಣೆಗೊಂಡ ಶಿಕ್ಷಕರನ್ನು ಬಿಡುಗಡೆ ಮಾಡುವುದು.

12.2 ಜಿಲ್ಲೆ/ ಕ್ಷೇತ್ರದಲ್ಲಿನ ಖಾಲಿ ಹುದ್ದೆಗಳು ಜಿಲ್ಲೆಯೊಳಗೆ/ಕ್ಷೇತ್ರಗಳ ಮಧ್ಯೆ ಮತ್ತು ಎಲ್ಲಾ ವರ್ಗದ ಎ,ಬಿ,ಸಿ,ಡಿ ಶಾಲೆಗಳ ಮಧ್ಯೆ ಆದಷ್ಟು ಮಟ್ಟಿಗೆ ಸಮಾನುಪಾತದಲ್ಲಿ ಹಂಚಿಕೆಯಾಗುವಂತೆ ನೋಡಿಕೊಳ್ಳಬೇಕು. ಉದಾ.ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ಶೇ.5ರಷ್ಟು ಖಾಲಿ ಹುದ್ದೆಗಳು ಇದ್ದಲ್ಲಿ ಆ ಹುದ್ದೆಗಳು ಜಿಲ್ಲೆಯ ಎಲ್ಲಾ ಬ್ಲಾಕ್‌ಗಳ ಎ,ಬಿ,ಸಿ,ಡಿಶಾಲೆಗಳಲ್ಲಿ ಹಂಚಿಕೆ ಮಾಡಿ ನಗರ ಪ್ರದೇಶ ಹಾಗೂ ರಸ್ತೆ ಬದಿ ಶಾಲೆಗಳಿಗೆ ಹೆಚ್ಚಿನ ಶಿಕ್ಷಕರನ್ನು ವರ್ಗಾವಣೆ ಮಾಡುವ ಪರಿಪಾಠವನ್ನು ಬಿಟ್ಟು, ಜಿಲ್ಲೆಯಲ್ಲಿ ಹಿಂದುಳಿದ ತಾಲ್ಲೂಕುಗಳಲ್ಲಿ/ ಶಾಲೆಗಳಲ್ಲಿ ಶಿಕ್ಷಕರ ಕೊರತೆಯಾಗದಂತೆ ಮುಂಜಾಗ್ರತಾ ಕ್ರಮ ತೆಗೆದುಕೊಳ್ಳುವುದು.

12.3 ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸಿರುವ ಶಿಕ್ಷಕರು ಗ್ರಾಮಾಂತರ ಪ್ರದೇಶದ ಶಾಲೆಗಳನ್ನು ಮಾತ್ರ ಆರಿಸಿಕೊಳ್ಳಬಹುದು. ಪರಸ್ಪರ ವರ್ಗಾವಣೆಯನ್ನೊಳಗೊಂಡಂತೆ, ನಗರದಿಂದ ನಗರ ಪ್ರದೇಶಕ್ಕೆ ವರ್ಗಾವಣೆಗೆ ಅವಕಾಶವಿಲ್ಲ.

12.4 ರಾಜ್ಯ ಸರ್ಕಾರಿ ನೌಕರರಾದ ದಂಪತಿಗಳ ವರ್ಗಾವಣೆಗಳು ಗ್ರಾಮಾಂತರ ಪ್ರದೇಶಕ್ಕೆ ಮಾತ್ರ ಮಾಡತಕ್ಕದ್ದು. ನಗರ ಪ್ರದೇಶಕ್ಕೆ ಮಾಡತಕ್ಕದ್ದಲ್ಲ.

12.5 ಶಿಕ್ಷಕರ ಅನುಕೂಲಕ್ಕಾಗಿ ವಿಷಯಗಳನ್ನು ಬದಲಾಯಿಸಿ ವರ್ಗಾವಣೆಗಳನ್ನು ಮಾಡತಕ್ಕದ್ದಲ್ಲ. ಉದಾ: ಖಾಲಿಯಿರುವ ಹಿಂದಿ / ವಿಜ್ಞಾನ / ಇಂಗ್ಲೀಷ್ ವಿಷಯಗಳ ಹುದ್ದೆಗೆ ಕಲಾ ಶಿಕ್ಷಕರನ್ನು ವರ್ಗಾವಣೆ ಮಾಡಬಾರದು. ಅಥವಾ ಹಿಂದು ಮುಂದು (vice-versa) ಮಾಡಬಾರದು.

12.6 ವರ್ಗಾವಣೆಯನ್ನು ಕೌನ್ಸಿಲಿಂಗ್ ಮೂಲಕ ನ್ಯಾಯಯುತ ಮತ್ತು ಪಾರದರ್ಶಕ ರೀತಿಯಲ್ಲಿ ಮಾಡುವುದು ಆಯಾ ಉಪನಿರ್ದೇಶಕರ ಜವಾಬ್ದಾರಿಯಾಗಿದ್ದು, ವರ್ಗಾವಣೆ ಪ್ರಕ್ರಿಯೆಯನ್ನು ಪ್ರತಿ ಹಂತದಲ್ಲೂ ಆಯಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮೇಲ್ವಿಚಾರಣೆ ಮಾಡತಕ್ಕದ್ದು.

**13. ಹಂತ 5 : ಕೌನ್ಸಿಲಿಂಗ್ ಮೂಲಕ ಜೇಷ್ಠತಾ ಘಟಕದ ಹೊರಗಿನ (outside) ಕೋರಿಕೆ ವರ್ಗಾವಣೆಗಳು.**

13.1 ಜೇಷ್ಠತಾ ಘಟಕದ ಹೊರಗಿನ (outside) ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ಸೂಚನೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಇಡಿ 298 ಡಿಪಿಐ 2005 ದಿನಾಂಕ: 4.5.05 ರಲ್ಲಿ ನೀಡಿರುವ ಸೂಚನೆಗಳನ್ನು ಪಾಲಿಸತಕ್ಕದ್ದು.

13.2 ಜಿಲ್ಲಾ ಹಂತದಲ್ಲಿನ ವರ್ಗಾವಣೆಗಳನ್ನು ಕೌನ್ಸಿಲಿಂಗ್ ಮೂಲಕ ಪೂರ್ಣಗೊಳಿಸಿದ ನಂತರ ಅಂತರ ಘಟಕ ವರ್ಗಾವಣೆಗಳನ್ನು ಕೈಗೆತ್ತಿಕೊಳ್ಳಬೇಕು.

13.3 ಜಿಲ್ಲಾ ಹಂತದಲ್ಲಿ ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಪ್ರಕ್ರಿಯೆ ಪೂರ್ಣಗೊಳಿಸಿದ ಕೂಡಲೆ ಉಪನಿರ್ದೇಶಕರು ಖಾಲಿ ಉಳಿದಿರುವ ಹುದ್ದೆಗಳ ಮಾಹಿತಿಯನ್ನು ವಿಭಾಗದೊಳಗಿನ (ಜಿಲ್ಲೆಯಿಂದ ಜಿಲ್ಲೆಗೆ) ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಖಾಲಿ ಹುದ್ದೆಗಳ ಮಾಹಿತಿಯನ್ನು ಸಂಬಂಧಿಸಿದ ನಿರ್ದೇಶಕರುಗಳಿಗೆ ಸಲ್ಲಿಸುವುದು.

| ಕ್ರ.ಸಂ | ವಿಭಾಗ | ಅಧಿಕಾರ |
|---|---|---|
| 1 | ಗುಲ್ಬರ್ಗಾ ವಿಭಾಗ | ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಗುಲ್ಬರ್ಗಾ |
| 2 | ಬೆಳಗಾಂ ವಿಭಾಗ | ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಧಾರವಾಡ |
| 3 | ಮೈಸೂರು ವಿಭಾಗ | ನಿರ್ದೇಶಕರು(ಪ್ರೌಢಶಿಕ್ಷಣ), ಆಯುಕ್ತರ ಕಛೇರಿ, ಬೆಂಗಳೂರು |
| 4 | ಬೆಂಗಳೂರು ವಿಭಾಗ | ನಿರ್ದೇಶಕರು(ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಛೇರಿ, ಬೆಂಗಳೂರು |

13.4 ಅಂತರ ಘಟಕ ನೇಮಕಾತಿಗಾಗಿ ಪ್ರತ್ಯೇಕ ಅರ್ಜಿ ನಮೂನೆಗಳನ್ನು ನಿಗಧಿಪಡಿಸಲಾಗಿದೆ.

13.5 ವಿಭಾಗ ಮಟ್ಟದ ವರ್ಗಾವಣೆಯ ನಂತರ ಸಂಬಂಧಿಸಿದ ನಿರ್ದೇಶಕರುಗಳು ಖಾಲಿ ಹುದ್ದೆಗಳ ಮಾಹಿತಿಯನ್ನು ಆಯುಕ್ತರು, ಬೆಂಗಳೂರು, ಇವರಿಗೆ ಸಲ್ಲಿಸುವುದು.

13.6 ಅಂತರ ಘಟಕ ಕೋರಿಕೆ ವರ್ಗಾವಣೆಗಳನ್ನು ಎ ಮತ್ತು ಬಿ ವರ್ಗದ ಶಾಲೆಗಳಲ್ಲಿ ಖಾಲಿ ಹುದ್ದೆಗಳಿಗೆ ಮಾತ್ರ ಕೌನ್ಸಿಲಿಂಗ್ ಮಾಡಬೇಕು. ಸಿ ಮತ್ತು ಡಿ ವರ್ಗದ ಶಾಲೆಗಳಿಗೆ ಅಂತರ ಘಟಕ ವರ್ಗಾವಣೆಗಳನ್ನು ಮಾಡಬಾರದು.

**14. ಪ್ರೌಢಶಾಲಾ ಶಿಕ್ಷಕರ ವರ್ಗಾವಣೆಗೆ ಸಂಬಂಧಿಸಿದ ಹೆಚ್ಚುವರಿ ಸೂಚನೆಗಳು**

14.1 ಎಲ್ಲಾ ಸರ್ಕಾರಿ ಪ್ರೌಢಶಾಲೆಗಳಲ್ಲಿ ಸಿಬ್ಬಂದಿ ಮಾದರಿ ಪ್ರಕಾರ ಪಿ.ಸಿ.ಎಂ., ಸಿ.ಬಿ.ಜಡ್, ಕಲಾ, ಕನ್ನಡ, ಹಿಂದಿ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಇರುವಂತೆ ನೋಡಿಕೊಳ್ಳುವುದು.

14.2 ಪ್ರೌಢಶಾಲೆಗಳಲ್ಲಿ ವಿಷಯವಾರು ಹುದ್ದೆಗಳನ್ನು ವಿನಿಮಯ ಮಾಡಬಾರದು **ಉದಾಹರಣೆ:** ಕನ್ನಡ ಅಥವಾ ಕಲಾ ಶಿಕ್ಷಕರ ಖಾಲಿ ಹುದ್ದೆಗೆ ಪಿ.ಸಿ.ಎಂ. ಅಥವಾ ಹಿಂದಿ ಶಿಕ್ಷಕರನ್ನು ನೇಮಿಸಬಾರದು.

15. ಈ ಮೇಲಿನ ಮಾರ್ಗಸೂಚಿಗಳನ್ವಯ 2006–07ನೇ ಸಾಲಿನ ಹಾಗೂ ನಂತರದ ಸಾರ್ವತ್ರಿಕ ವರ್ಗಾವಣೆಯಿಂದ ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರ ವರ್ಗಾವಣೆಗಳನ್ನು ಕೌನ್ಸಿಲಿಂಗ್ ಮೂಲಕವೇ ಮಾಡತಕ್ಕದ್ದು.

**ತ.ಮ. ವಿಜಯ ಭಾಸ್ಕರ್**
ಸರ್ಕಾರದ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

2006–07ನೇ ಸಾಲಿನ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ವರ್ಗಾವಣೆ ವೇಳಾ ಪಟ್ಟಿ:

| ಕ್ರ.ಸಂ | ವಿವರ | ದಿನಾಂಕ |
|---|---|---|
| 1 | ಎ.ಬಿ.ಸಿ.ಡಿ ವರ್ಗದ ಶಾಲೆಗಳನ್ನು ಗುರುತಿಸುವುದು | 25.1.06 ರಿಂದ 10.2.06 |
| 2 | ತಾತ್ಕಾಲಿಕ ಪಟ್ಟಿಯನ್ನು ಪ್ರಕಟಿಸುವುದು | 11–2–2006 |
| 3 | ಆಕ್ಷೇಪಣೆಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | 25.2.06 |
| 4 | ಆಕ್ಷೇಪಣೆಗಳನ್ನು ಪರಿಶೀಲಿಸಿ ಎ.ಬಿ.ಸಿ.ಡಿ ವರ್ಗದ ಶಾಲೆಗಳ ಅಂತಿಮ ವರ್ಗೀಕರಣ ಪಟ್ಟಿ ಪ್ರಕಟಣೆ | 3.3.06 |
| 5 | ಕೇಂದ್ರೀಯ ದಾಖಲಾತಿ ಘಟಕದಿಂದ ಅಗತ್ಯ ಸಾಫ್ಟ್‌ವೇರ್‌ನ್ನು ಜಿಲ್ಲೆಗಳಿಗೆ ಕೊಡಲು ಕೊನೆಯ ದಿನಾಂಕ ಹಾಗೂ ಜಿಲ್ಲಾ ನೋಡಲ್ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ಪೂರ್ವಭಾವಿ ತರಬೇತಿ/ಸಭೆ | 13.3.2006 |
| 6 | ಹೆಚ್ಚುವರಿ ಶಿಕ್ಷಕರನ್ನು ಅಗತ್ಯವಿರುವ ಶಾಲೆಗಳಿಗೆ ಕೌನ್ಸಿಲಿಂಗ್ ಮೂಲಕ ಮರು ಹಂಚಿಕೆ ಮಾಡುವುದು. | 6.4.2006 ರೊಳಗೆ |

| ಕ್ರ.ಸಂ | ವಿವರ | ದಿನಾಂಕ |
|---|---|---|
| 7 | ಕಡ್ಡಾಯ ಗ್ರಾಮಾಂತರ ಸೇವೆ ಸಲ್ಲಿಸಿರದ ಶಿಕ್ಷಕರನ್ನು ಗ್ರಾಮೀಣ ಶಾಲೆಗಳಿಗೆ ಕೌನ್ಸಿಲಿಂಗ್ ಮೂಲಕ ವರ್ಗಾಹಿಸುವುದು. | 7.4.2005 |
| 8 | ವರ್ಗಾವಣೆ ಬಯಸುವ ಶಿಕ್ಷಕರಿಂದ ಅರ್ಜಿಗಳನ್ನು ಕರೆಯಲು ಪ್ರಕಟಣೆ– ಕ್ಷೇ.ಶಿ.ಅ. ಹಾಗೂ ಉಪನಿರ್ದೇಶಕರ ಕಛೇರಿಗಳ ಸೂಚನಾ ಫಲಕದಲ್ಲಿ ಹಾಗೂ ಪ್ರಸಾರ ಮಾಧ್ಯಮದಲ್ಲಿ | 10.4.2006 |
| 9 | ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಶಿಕ್ಷಕರು ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ | 20.4.2006 |
| 10 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಹಂತದಲ್ಲಿ ಶಿಕ್ಷಕರ ಅರ್ಜಿಗಳ ಪರಿಶೀಲನೆ, ಮಾಹಿತಿ ದೃಢೀಕರಣ | 29.4.2006 |
| 11 | ದೃಢೀಕರಿಸಿದ ವರ್ಗಾವಣೆ ಅರ್ಜಿಗಳನ್ನು ಉಪನಿರ್ದೇಶಕರಿಗೆ ಸಲ್ಲಿಸುವ ದಿನಾಂಕ | 6.5.2006 |
| 12 | ತಾತ್ಕಾಲಿಕ ಆದ್ಯತಾ ಪಟ್ಟಿ ಹಾಗೂ ಖಾಲಿ ಹುದ್ದೆಗಳ ಪಟ್ಟಿ ಪ್ರಕಟಣೆ – ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಉಪನಿರ್ದೇಶಕರ ಕಛೇರಿಗಳ ಸೂಚನಾ ಫಲಕದಲ್ಲಿ | 12.5.06 |
| 13 | ಆಕ್ಷೇಪಣೆಗಳನ್ನು ಸಲ್ಲಿಸಲು ಕೊನೆಯ ದಿನಾಂಕ: | 15/16.5.2006 |
| 14 | ಅಂತಿಮ ಆದ್ಯತಾ ಪಟ್ಟಿ ಹಾಗೂ ಖಾಲಿ ಹುದ್ದೆಗಳ ಪಟ್ಟಿ ಪ್ರಕಟಣೆ – ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಉಪನಿರ್ದೇಶಕರ ಕಛೇರಿಗಳ ಸೂಚನಾ ಫಲಕದಲ್ಲಿ | 17.5.2006 |
| 15 | ಜಿಲ್ಲಾ ಮಟ್ಟದಲ್ಲಿ ಕೌನ್ಸಿಲಿಂಗ್ (ಪ್ರಾಥಮಿಕ ಶಾಲಾ ಶಿಕ್ಷಕರ ಕೇಡರ್ ತಾಲ್ಲೂಕು ಮಟ್ಟದ್ದು ಆಗಿದ್ದರೂ ಕೌನ್ಸಿಲಿಂಗ್ ಜಿಲ್ಲಾ ಮಟ್ಟದಲ್ಲಿ ನಡೆಯುವುದು) | 19/20.5.2006 |
| 16 | ಉಪನಿರ್ದೇಶಕರು ಖಾಲಿ ಹುದ್ದೆಗಳ ಮಾಹಿತಿಯನ್ನು ನಿರ್ದೇಶಕರಿಗೆ ನೀಡುವುದು. | 22.5.06 |
| 17 | ವಿಭಾಗ ಮಟ್ಟದ ಕೌನ್ಸಿಲಿಂಗ್ | 23.5.2006 |
| 18 | ನಿರ್ದೇಶಕರುಗಳು ಖಾಲಿ ಹುದ್ದೆಗಳ ಮಾಹಿತಿಯನ್ನು ಮಾನ್ಯ ಆಯುಕ್ತರಿಗೆ ನೀಡುವುದು. | 25.5.06 |
| 19 | ರಾಜ್ಯ ಮಟ್ಟದ ಕೌನ್ಸಿಲಿಂಗ್ | 26/27.5.2006 |
| 20 | ಶಿಕ್ಷಕರು ವರ್ಗಾವಣೆಗೊಂಡು ಶಾಲೆಯಲ್ಲಿ ಹಾಜರಾಗುವುದು | 31.5.2006 |

**ತ.ಮ. ವಿಜಯ ಭಾಸ್ಕರ್**
ಪಿ.ಆರ್. 134 ಸರ್ಕಾರದ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಹೆಸರನ್ನು ಮರು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1) ಭಾರತ ಸರ್ಕಾರದ ಪತ್ರದ ಸಂಖ್ಯೆ: 2-2815.30.2004- ಪಿ ಅಂಡ್ ಸಿ ದಿನಾಂಕ: 23.12.2003 ಹಾಗೂ ಅರೆ ಸರ್ಕಾರಿ ಪತ್ರ ದಿನಾಂಕ: 16.4.2004 ಮತ್ತು ದಿನಾಂಕ: 2.9.2005.

2) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದ ಸಂಖ್ಯೆ: ಐಎಸ್‌ಎಂ.59.ಡಿಇವಿ(4).2004-05, ದಿನಾಂಕ: 26.4.2005.

**ಪ್ರಸ್ತಾವನೆ:**

ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ ನವದೆಹಲಿ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಅಧಿಸೂಚನೆ ಸಂಖ್ಯೆ: 1.22.1.2003-ಸಿಎಬಿ(1), ದಿನಾಂಕ: 11.11.2003 ರಲ್ಲಿ ಕೇಂದ್ರದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಹೆಸರನ್ನು ಬದಲಾಯಿಸಿ "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ (Ayush) ಇಲಾಖೆಯೆಂದು ಮರು ಪದನಾಮೀಕರಿಸಿ ಭಾರತ ಸರ್ಕಾರವು ಆದೇಶ ಹೊರಡಿಸಿದ್ದು, ಇದೇ ರೀತಿ ಎಲ್ಲಾ ರಾಜ್ಯಗಳಲ್ಲೂ ಇಲಾಖೆಯ ಹೆಸರನ್ನು ಮರು ಪದನಾಮೀಕರಿಸಲು ಕೋರಿದ್ದಾರೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರು ಇಲಾಖೆಯ ಹೆಸರನ್ನು ಕೇಂದ್ರ ಸರ್ಕಾರದ ಆದೇಶದನ್ವಯ ನಮ್ಮ ರಾಜ್ಯದಲ್ಲಿಯೂ ಸಹ "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ ನಿರ್ದೇಶನಾಲಯ (ಅಯುಷ್) ಎಂದು ಹೆಸರು ಬದಲಾವಣೆ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 7 ಪಿಐಎಂ 2005, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯದ ಹೆಸರನ್ನು "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ ನಿರ್ದೇಶನಾಲಯ (ಅಯುಷ್) ನಿರ್ದೇಶನಾಲಯ ಎಂದು ಸರ್ಕಾರವು ಮರು ಪದನಾಮೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಬಿ. ಗಣಾಚಾರಿ**
ಪಿ.ಆರ್. 49 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.